

"ಟಿಪ್ಪು ಒಬ್ಬ ದೇಶಪ್ರೇಮಿ", ವೀರ, ಹುತಾತ್ಮ, ಸರ್ವಧರ್ಮ ಪ್ರೇಮಿ ಎಂದು ಹಲವರು ಅವನನ್ನು ವಿಜೃಂಭಿಸಿದ್ದಾರೆ. ಆದರೆ ಅವನ ಮೂಲ ದಾಖಲೆಗಳನ್ನು ಪರಿಶೀಲಿಸಿದರೆ ಅವನೊಬ್ಬ ಕ್ರೂರಿ, ಮತಾಂಧ, ಸ್ವಾರ್ಥಿ, ಕರ್ನಾಟಕ ಚರಿತ್ರೆಗೆ ಕಳಂಕ ತಂದಿರುವವನು ಎಂಬುದು ಸ್ಪಷ್ಟವಾಗುತ್ತದೆ.

ಅನೇಕ ಪ್ರಮುಖ ದಾಖಲೆಗಳನ್ನು ಅವಲಂಬಿಸಿರುವ ಈ ಕೃತಿ ಟಿಪ್ಪುವಿನ ನಿಜ ಚರಿತ್ರೆಯನ್ನು ಬಿಚ್ಚಿಡುತ್ತದೆ. ಭಾರತದ ಇಂದಿನ ಮುಂದಿನ ಸ್ಥಿತಿ ಬಗ್ಗೆ ಗಂಭೀರ ಚಿಂತನೆಗೆ ತೊಡಗಿಸುತ್ತದೆ. ಇಲ್ಲಿಯ ಬಹುತೇಕ ಅಭಿಪ್ರಾಯಗಳು ಸಂಪೂರ್ಣ ವಸ್ತುನಿಷ್ಠ; ಮತ್ತು ಅವುಗಳನ್ನು ನೇರವಾಗಿ ಕೊಂಕು, ವ್ಯಂಗ್ಯ, ಅನಾಗರಿಕ ಅಲ್ಲದ ಭಾಷೆ ಮತ್ತು ರೀತಿಗಳಲ್ಲಿ ಈ ಕೃತಿಯಲ್ಲಿ ಪ್ರತಿಪಾದಿಸಲಾಗಿದೆ".

ಡಾ|| ಎಂ. ಚಿದಾನಂದಮೂರ್ತಿ
(080-23300687)





# ಮೂಲ ದಾಖಲೆಗಳಲ್ಲಿ ಹುದುಗಿದ್ದ ಟಿಪ್ಪು

ಡಾ|| ಎಂ. ಚಿದಾನಂದಮೂರ್ತಿ



# ಮೂಲ ದಾಖಲೆಗಳಲ್ಲಿ ಹುದುಗಿದ್ದ ಟಿಪ್ಪು

ಡಾ|| ಎಂ. ಚಿದಾನಂದಮೂರ್ತಿ

ಭಾರತ ವಿಕಾಸ ಪರಿಷತ್ತು
(ಪರಾಶರ ಶಾಖೆ)
ಬೆಂಗಳೂರು

18.

ಪ್ರಕಾಶಕರು : ಭಾರತ ವಿಕಾಸ ಪರಿಷತ್ (ಪರಾಶರ ಶಾಖೆ)
ಚರವಾಣಿ : 98453 38658

ಪ್ರಥಮ ಆವೃತ್ತಿ : 2013

ಪುಟಗಳು : vii + 101

ಪ್ರತಿಗಳು : 5,000

ಬೆಲೆ : ರೂ. 100/-

ಮುಖಪುಟ ಚಿತ್ರ : ಟಿಪ್ಪು ಮತ್ತು ಆಂಜನೇಯ ದೇವಾಲಯ ಕೆಡವಿ ಟಿಪ್ಪು ಕಟ್ಟಿಸಿರುವ ಮಸೀದಿ (ಶ್ರೀರಂಗಪಟ್ಟಣ)

ಮುಖ ಪುಟ ವಿನ್ಯಾಸ ಮತ್ತು ಅಕ್ಷರ ಜೋಡಣೆ : **ಸ್ಕಂದ ಕ್ರಿಯೇಷನ್ಸ್,**
ಕಾಟನ್ ಪೇಟೆ, ಬೆಂಗಳೂರು
ಸ್ಥಿರವಾಣಿ: 9964241844

ಮುದ್ರಣ : **ಶ್ರೀ ಸಾಯಿನಾಥ್ ಗ್ರಾಫಿಕ್ಸ್,**
ಕಾಟನ್ ಪೇಟೆ ಮುಖ್ಯ ರಸ್ತೆ,
ಬೆಂಗಳೂರು - 560 053
ಚರವಾಣಿ : 080-26700650



## ಪರಿವಿಡಿ

# ಪ್ರಸ್ತಾವನೆ

2012ರ ನವೆಂಬರ್ ಮಧ್ಯದಲ್ಲಿ ಕೇಂದ್ರ 'ಅಲ್ಪಸಂಖ್ಯಾತ' ಸಚಿವ ರೆಹಮಾನ್ ಖಾನ್ ದೇಶದಲ್ಲಿ ಐದು ಮುಸ್ಲಿಂ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸುವುದಾಗಿಯೂ, ಕರ್ನಾಟಕದ ಶ್ರೀರಂಗಪಟ್ಟಣದಲ್ಲಿ ಟಿಪ್ಪು ಹೆಸರಿನಲ್ಲಿ ಮುಸ್ಲಿಂ ವಿಶ್ವವಿದ್ಯಾಲಯ ಸ್ಥಾಪಿಸುವುದಾಗಿ ಘೋಷಿಸಿದ ಬೆನ್ನಲ್ಲೇ 20–11–2012 ರಂದು ಬೆಂಗಳೂರಿನಲ್ಲಿ ನಾನು ಪತ್ರಿಕಾಗೋಷ್ಠಿ ಕರೆದು, ಕಾರಣಗಳನ್ನು ನೀಡಿ ಟಿಪ್ಪು ಹೆಸರಿನ ವಿಶ್ವವಿದ್ಯಾಲಯ ಸ್ಥಾಪಿಸುವುದನ್ನು ವಿರೋಧಿಸಿದೆ. ಅದನ್ನು ಸಮರ್ಪಕವಾಗಿ ವರದಿ ಮಾಡಿದ "ಕನ್ನಡ ಪ್ರಭ" ಪತ್ರಿಕೆಯು ಮುಂದೆ ನನ್ನನ್ನು ಸಂದರ್ಶನ ಮಾಡಿದುದನ್ನು ಯಥಾವತ್ತಾಗಿ ಪ್ರಕಟಿಸಿತು (ಕ. ಪ್ರ. 25–11–2012). ಅದು "ಟಿಪ್ಪು ವಿ.ವಿ.ಯಲ್ಲಿ ಓದುವುದೇ ಕಳಂಕ" ಎಂದು ಬಿಂಬಿಸಿತು. ಪತ್ರಿಕಾ ವರದಿ, ಆ ಸಂದರ್ಶನ ಇವುಗಳನ್ನು ಓದಿ ನನ್ನ ಮತ್ತು ಕನ್ನಡ ಪ್ರಭ ವರದಿಗಾರ ರಾಘವೇಂದ್ರ ಭಟ್ ಮೇಲೆ ಬೆಂಗಳೂರಿನ "ಟಿಪ್ಪು ಸುಲ್ತಾನ್ ಯುನೈಟೆಡ್ ಫ್ರಂಟ್" 28–11–2012ರಂದು ಕಬ್ಬನ್ ಪಾರ್ಕ್ ಪೊಲೀಸ್ ಠಾಣೆಯಲ್ಲಿ ಆರೋಪ ಹೊರಿಸಿ ಮೊಕದ್ದಮೆ ಹೂಡಿದ್ದಾರೆ. ಆ ಮೊಕದ್ದಮೆಯ ವಿಷಯ –"ಕನ್ನಡದ ಬರಹಗಾರರಲ್ಲೊಬ್ಬರಾದ ಡಾ. ಚಿದಾನಂದಮೂರ್ತಿಯವರು ಹಾಗೂ ಕನ್ನಡ ಪ್ರಭ ವರದಿಗಾರರಾದ ರಾಘವೇಂದ್ರ ಭಟ್ ರವರೂ ಸೇರಿ ಮೈಸೂರು ಹುಲಿ ಎಂಬ ಬಿರುದಾಂಕಿತ ಟಿಪ್ಪು ಸುಲ್ತಾನ್‌ರ ಚರಿತ್ರೆಯನ್ನೇ ತಿರುಚಿ ಅವಹೇಳನಕಾರಿ ಹೇಳಿಕೆಗಳನ್ನು ಪ್ರಕಟಿಸುವುದರ ಮೂಲಕ ಹಿಂದೂ ಮುಸ್ಲಿಂ ಸಂಘರ್ಷಕ್ಕೆ ದಾರಿಯಾಗಿರುವ ಬಗ್ಗೆ". ಆ ಮೊಕದ್ದಮೆ ದಾಖಲಾದ ದಿನವೇ ಪತ್ರಿಕೆಯವರು ನನ್ನ ಪ್ರತಿಕ್ರಿಯೆಯನ್ನು ತಿಳಿಸಲು ಕೇಳಿದಾಗ ಆ ಮೊಕದ್ದಮೆಯ ಪ್ರತಿ ನನ್ನ ಕೈಗೆ ಬಂದಿರದಿದ್ದರೂ "ನಾನು ಅದನ್ನು ಸಮರ್ಥವಾಗಿ ಎದುರಿಸುತ್ತೇನೆ" ಎಂಬ ನನ್ನ ಪ್ರತಿಕ್ರಿಯೆ ಮಾರನೆಯ ದಿನ ಪತ್ರಿಕೆಗಳಲ್ಲಿ ಪ್ರಕಟವಾಯಿತು. ನನಗಿನ್ನೂ ನ್ಯಾಯಾಲಯದಿಂದ ಹಾಜರಾಗಲು ಯಾವುದೇ ಪತ್ರ ಬಂದಿರಲಿಲ್ಲ. ಹಾಗೆ ಬಂದರೆ, ಮೂವರು ಶ್ರೇಷ್ಠ ವಕೀಲರು ನನ್ನ ಪರವಾಗಿ ವಾದ ಮಂಡಿಸಲು ತಾವು ಸಿದ್ಧವೆಂದು ದೂರವಾಣಿ ಮೂಲಕ ತಿಳಿಸಿದ್ದರು. ಅವರ ಬೆಂಬಲ ಬೇಕೇ? ಅಥವಾ ನಾನೇ ನೇರವಾಗಿ ನ್ಯಾಯಾಧೀಶರ ಮುಂದೆ ನನ್ನಲ್ಲಿರುವ ನೇರ ದಾಖಲೆಗಳನ್ನು ಹಾಜರುಪಡಿಸಿ ನನ್ನ ನಿಲುವನ್ನು ಸಮರ್ಥಿಸಿಕೊಳ್ಳಲೇ ಎಂಬುದರ ಬಗ್ಗೆ ಇನ್ನೂ ನಿರ್ಧಾರಕ್ಕೆ ಬಂದಿಲ್ಲ. ಈಚೆಗೆ ನನ್ನ ಕೋರಿಕೆ ಮೇರೆಗೆ ವಕೀಲರಾದ ಸತೀಶ್ ಚಂದ್ರ ಮೊಕದ್ದಮೆ ದಾಖಲೆ ಒದಗಿಸಿದ್ದಾರೆ. ಇಷ್ಟಂತೂ ನಿಜ, ಈಗಾಗಲೇ ಆ ವಿಷಯಕ್ಕೆ ಸಂಬಂಧಿಸಿದಂತೆ ನಾನು ಪತ್ರಿಕೆಗಳಿಗೆ ಲೇಖನಗಳನ್ನು, ಪತ್ರಗಳನ್ನು ಬರೆದಿದ್ದೇನೆ. ಹಲವರು

ಪ್ರಸಿದ್ಧ ಸಾಹಿತಿಗಳು ನನ್ನನ್ನು ಖಂಡಿಸಿ ಮಾತನಾಡಿದ್ದಾರೆ. ಒಂದೆರಡು ಸಂಘಟನೆಗಳು ಟಿಪ್ಪು ಹೆಸರನ್ನು ಬೆಂಬಲಿಸಿ ಮೆರವಣಿಗೆ ಮಾಡಿವೆ. ನಾನು ದಾರಿಯಲ್ಲಿ ಭೇಟಿಯಾದಾಗ ಹಲವರು ತಾವೇ ಬಂದು ಮಾತನಾಡಿಸಿ ನನ್ನ ನಿಲುವನ್ನು ಮೆಚ್ಚಿದ್ದಾರೆ. ಒಬ್ಬ ಅಪರಿಚಿತರು ನನಗೆ ಎರಡು ಪುಟಗಳ ಮೆಚ್ಚುಗೆಯ ಪತ್ರ ಬರೆದು ಒಂದು ಸಾವಿರ ರೂಪಾಯಿಗಳ ಚೆಕ್ಕನ್ನು ಅದರ ಜೊತೆ ಇಟ್ಟು 'ಬಹುಮಾನ' ಎಂದು ತಿಳಿಸಿದ್ದಾರೆ. ಒಬ್ಬರು 'ದಲಿತ ಸಂಘರ್ಷ ಸಮಿತಿ'ಯ ಕಾರ್ಯಕರ್ತರೆಂದು ಹೇಳಿಕೊಂಡು ತಮ್ಮ ವಿಳಾಸ ಕೊಟ್ಟು, ಪೋಸ್ಟ್ ಕಾರ್ಡಿನಲ್ಲಿ ನನ್ನನ್ನು 'ಪಾಪಿ' ಎಂದು ಕರೆದು, ನನ್ನ ವಯಸ್ಸನ್ನು ಹೇಳಿ ಬೇಗ ಸಾಯಲು ತಿಳಿಸಿ ಅತಿ ಅಶ್ಲೀಲ ಭಾಷೆಯಲ್ಲಿ ನಿಂದಿಸಿದ್ದಾರೆ. ಅದನ್ನು ಈ ಪುಸ್ತಕದಲ್ಲಿ ಅದು ಇರುವಂತೆಯೇ ಅಚ್ಚುಮಾಡಿಸಬೇಕೆಂದಿದ್ದವನು ಪುಸ್ತಕಕ್ಕೆ ಅದೊಂದು ಕಳಂಕವಾದೀತೆಂದು ಆ ಆಲೋಚನೆ ಕೈಬಿಟ್ಟೆ. ಪೂಜ್ಯರಾದ ಶ್ರೀ ಪೇಜಾವರ ವಿಶ್ವೇಶ್ವರ ತೀರ್ಥರು ಪತ್ರ ಬರೆದು ಬೆಂಬಲಿಸಿ ತಮ್ಮ ಆಶೀರ್ವಾದ ತಿಳಿಸಿದ್ದಾರೆ. ಟಿಪ್ಪು ವಿಶ್ವವಿದ್ಯಾಲಯ ವಿರೋಧಿಸಿ ಆರ್.ಎಸ್.ಎಸ್. ಸಂಘಟನೆಯು ಬೆಂಗಳೂರು, ಮೈಸೂರು, ದಾವಣಗೆರೆಗಳಲ್ಲಿ ನಡೆಸಿದ ಅಭೂತಪೂರ್ವ ಸಭೆಗಳಿಗೆ ನಾನು ಹೋಗಿದ್ದೆ. ಮುಂದೆಯೂ ಹೋಗುತ್ತೇನೆ. ಬೆಂಗಳೂರಲ್ಲಿ ಟಿಪ್ಪು ಹೆಸರಿನ ಮತಾಧಾರಿತ ವಿ.ವಿ. ವಿರೋಧಿಸಿ ಶ್ರೀರಾಮ ಸೇನಾ ಸಂಘಟನೆಯ ಪ್ರಮೋದ್ ಮುತಾಲಿಕ್ ವ್ಯವಸ್ಥೆ ಮಾಡಿದ್ದ ಪತ್ರಿಕಾಗೋಷ್ಠಿಗೂ ಹೋಗಿದ್ದೆ. ದಕ್ಷಿಣ ಕನ್ನಡ, ಕೊಡಗುಗಳಲ್ಲೂ ಟಿಪ್ಪು ವಿ.ವಿ. ವಿರೋಧಿಸಿ ಸಭೆಗಳು ನಡೆದಿವೆ. ಅಖಿಲ ಕರ್ನಾಟಕ ಕ್ಯಾಥೋಲಿಕ್ ಕ್ರೈಸ್ತರ ಕನ್ನಡ ಸಂಘವೂ ವಿರೋಧಿಸಿದೆ.

ನಾನು "ಕೇಸರೀಕರಣ' ಗೊಂಡಿದ್ದೇನೆಂದು ಒಬ್ಬರು ಟೀಕಿಸಿ ಪತ್ರಿಕಾ ಹೇಳಿಕೆ ನೀಡಿದ್ದಕ್ಕೆ, ನೀಡಿದ ನನ್ನ ಪ್ರತಿಕ್ರಿಯೆ 'ವಿಜಯವಾಣಿ' ಪತ್ರಿಕೆಯಲ್ಲಿ ಪ್ರಕಟವಾಗಿದೆ ಅದು ಹೀಗಿದೆ. "ಇತ್ತೀಚೆಗೆ ಕೆಲವರು ಒಂದು ಘಟ್ಟದವರೆಗೆ ಸರಿಯಾಗಿದ್ದ ನಾನು ಈಚೆಗೆ 'ಕೇಸರೀಕರಣ'ಗೊಂಡಿದ್ದೇನೆ ಎಂದು ಹೇಳಿರುವುದು ಪತ್ರಿಕೆಗಳಲ್ಲಿ ವರದಿಯಾಗಿದೆ. ನಾನು 'ಕೇಸರೀಕರಣ' ಗೊಂಂಡಿರುವುದು ನಿಜ. ಒಂದು ಘಟ್ಟದವರೆಗೆ ನಾನು 'ಗೋವಿ' ನಂತಿದ್ದವನು. ಹಿಂದೂಗಳ ಮೇಲೆ ಭಾರತದಾದ್ಯಂತ, ಭಾರತದ ಹೊರಗೆ ಆಗುತ್ತಿರುವ ಅನ್ಯಾಯಗಳನ್ನು ಕಂಡು 'ಕೇಸರೀಕರಣ'ಗೊಂಡಿದ್ದೇನೆ. (ಕೇಸರಿ =ಕೆಂಪು, ಸಿಂಹ) ಆದರೆ ಇಂದಿಗೂ ಹಿಂದಿನ 'ಗೋವು' ತನವನ್ನು ಬಿಟ್ಟುಕೊಟ್ಟಿಲ್ಲ". ಇದು ನನ್ನ ಸ್ಪಷ್ಟ ನಿಲುವು.

ಈಚೆಗೆ ಬಿಜಾಪುರದಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾದ ಕೋ. ಚನ್ನಬಸಪ್ಪನವರು ಟಿಪ್ಪುವನ್ನು ಹೊಗಳಿ, ಸ್ವಲ್ಪ ವ್ಯಂಗ್ಯ ಮಿಶ್ರಿತ ಧ್ವನಿಯಲ್ಲಿ ನನ್ನ ಹೆಸರು ಹೇಳದೆ ನನ್ನನ್ನು ಟೀಕಿಸಿರುವುದಕ್ಕೆ ಪತ್ರಿಕಾಗೋಷ್ಠಿ (15–2–2013) ನಡೆಯಿಸಿ, ಮೂಲಭೂತ ಮಾಹಿತಿ ನೀಡಿ ಆ ಬಗ್ಗೆ 'ಕೋ ಚೆ. ಏನು ಹೇಳುತ್ತಾರೆ?" ಎಂದೇ ಪ್ರಶ್ನಿಸಿದ್ದೇನೆ. ಅದೇ



ಪತ್ರಿಕಾಗೋಷ್ಠಿಯಲ್ಲಿ ಒಂದು ಮುಖ್ಯ ವಿಷಯವನ್ನು ಪ್ರಸ್ತಾಪಿಸಿದೆ. 2003ರಲ್ಲಿ ಒಂದು ಅಹಿತಕರ ಘಟನೆಯಿಂದ ನೊಂದು "ಮುಂದೆ ಎಂದೆಂದೂ ನಾನು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನು ಒಪ್ಪಿಕೊಳ್ಳುವುದಿಲ್ಲ." ಎಂದು ಬಹಿರಂಗವಾಗಿ ಘೋಷಿಸಿದ್ದು ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಆದರೂ ನನ್ನ ಹೆಸರು ಆಗಾಗ್ಗೆ ಅಧ್ಯಕ್ಷರ 'ಸಾಧ್ಯ ಪಟ್ಟಿ'ಯಲ್ಲಿ ಪ್ರಕಟವಾಗುತ್ತಲೇ ಇದೆ ಮತ್ತು ಅಧ್ಯಕ್ಷರ ಆಯ್ಕೆ ದಿನದ ಸಭೆಯಲ್ಲಿ ನನ್ನ ಹೆಸರು ಪ್ರಸ್ತಾಪಿತವಾಗಿ ವಿವಾದಾಸ್ಪದ ವ್ಯಕ್ತಿಯಾದ್ದರಿಂದ ಅವರ ಹೆಸರು ಬೇಡ ಎಂದು ನನ್ನ ಹೆಸರು ಕೈಬಿಟ್ಟದ್ದು ನನಗೆ ಅಧಿಕೃತ ಮೂಲಗಳಿಂದ ತಿಳಿದ ಬಂತು. ನಾನು ಪತ್ರಿಕಾಗೋಷ್ಠಿಯಲ್ಲಿ ಅದನ್ನು ಸೂಕ್ಷ್ಮವಾಗಿ ಪ್ರಸ್ತಾಪಿಸಿ, ಮುಂದೆ ಯಾರೂ ನನ್ನ ಹೆಸರನ್ನು ಅಧ್ಯಕ್ಷ ಸ್ಥಾನಕ್ಕೆ ಸೂಚಿಸಬಾರದೆಂದು ಕೇಳಿಕೊಂಡಿದ್ದೇನೆ.

"ಮೂಲ ದಾಖಲೆಗಳಲ್ಲಿ ಅಡಗಿದ್ದ ಟಿಪ್ಪು" ಕಿರು ಕೃತಿಯ ರಚನೆಗೆ ಸಾಕಷ್ಟು ಶ್ರಮಿಸಿದ್ದೇನೆ. ಈ ವಿಷಯದಲ್ಲಿ ಸಹಕರಿಸಿರುವ ಮಿಥಿಕ್ ಸೊಸೈಟಿಯ ಗ್ರಂಥಪಾಲಕರಿಗೆ ಅಲ್ಲಿನ ಮ್ಯಾನೇಜರ್ ಜಯಸಿಂಹರಿಗೆ ನಾನು ಬಹು ಋಣಿಯಾಗಿದ್ದೇನೆ. ಇದರ ಒಂದೆರಡು ಚಿತ್ರಗಳನ್ನು ನೀಡಿರುವ ಮೈಚ. ಜಯದೇವ್, ಸಂತೋಷ್ ತಿಮ್ಮಯ್ಯ ಅವರಿಗೂ ನಾನು ಕೃತಜ್ಞನಾಗಿದ್ದೇನೆ. ಇಲ್ಲಿ ನಾನು ಹಲವು ಕೃತಿಗಳನ್ನು ಬಳಸಿಕೊಂಡು ಅವನ್ನು ಅಲ್ಲಲ್ಲಿ ಉಲ್ಲೇಖಿಸಿದ್ದೇನೆ – ಆ ವಿದ್ವಾಂಸರಿಗೆ ನಾನು ಋಣಿ. ಹಿಂದೆ ನನ್ನ "ಅಪಾರ್ಥ ಆಕ್ರಮಣಗಳಿಗೆ ಒಳಗಾಗಿರುವ ಹಿಂದೂ ಧರ್ಮ" ವನ್ನು ಪ್ರಕಟಿಸಿದ ಭಾರತ ವಿಕಾಸ ಪರಿಷತ್ತಿನ ಪದಾಧಿಕಾರಿಗಳೇ ಈ ಕೃತಿಯನ್ನು ಪ್ರಕಟಿಸಿದ್ದಾರೆ. ಅವರಿಗೂ, ಎನ್. ಶಂಕರಲಿಂಗಸ್ವಾಮಿ ಯವರಿಗೂ, ಡಿ.ಟಿ.ಪಿ. ಹಾಗೂ ಮುಖಪುಟ ವಿನ್ಯಾಸ ಮಾಡಿರುವ ಎನ್. ನಾಗರಾಜ್, ಮುದ್ರಣ ಕಾರ್ಯವನ್ನು ಕೈಗೆತ್ತಿಕೊಂಡಿರುವ ಶ್ರೀ ಸಾಯಿನಾಥ್ ಗ್ರಾಫಿಕ್ಸ್ ನವರಿಗೂ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಕೊನೆಯಲ್ಲಿ ಕೆಲವು ಚಿತ್ರಗಳ ಜೊತೆ, ನಾನು ಅಲ್ಲಲ್ಲಿ ಉಲ್ಲೇಖಿಸಿರುವ ದಾಖಲೆಗಳನ್ನು ಅವು ಇರುವಂತೆಯೇ ಅಚ್ಚು ಮಾಡಿಸಲಾಗಿದೆ. ಅದು ನನ್ನ ನಿರೂಪಣೆಯ ವಿಶ್ವಾಸಾರ್ಹತೆಯನ್ನು ದೃಢಪಡಿಸುತ್ತದೆ.

ಬೆಂಗಳೂರು
ದಿನಾಂಕ : 18.2.2013

ಎಂ. ಚಿದಾನಂದಮೂರ್ತಿ....
(080–23300687)

* * * *

# ಮೂಲ ದಾಖಲೆಗಳಲ್ಲಿ ಹುದುಗಿದ್ದ ಟಿಪ್ಪು

## 1. ಇತಿಹಾಸ

ಈ ಅಧ್ಯಾಯವನ್ನು ಬರೆಯಲು ಡಾ.ಪಿ.ಬಿ. ದೇಸಾಯಿ, ಡಾ. ಶ್ರೀನಿವಾಸ ರಿತ್ತಿ, ಡಾ. ಬಾ.ರಾ.ಗೋಪಾಲ್ ಬರೆದಿರುವ The History of Karnataka (1991) ಕೃತಿಯನ್ನು ಬಹುಮಟ್ಟಿಗೆ ಅವಲಂಬಿಸಿದ್ದೇನೆ. ಕಾರಣ, ಇದೊಂದು ಅತ್ಯಂತ ವಿಶ್ವಾಸಾರ್ಹ ಕೃತಿ.

ಹಿಂದೂ ಸಂಸ್ಕೃತಿಯನ್ನು ರಕ್ಷಿಸಲೆಂಬ ಧ್ಯೇಯೋದ್ದೇಶದಿಂದಲೇ 1336ರಲ್ಲಿ ಉಗಮಗೊಂಡ ವಿಜಯನಗರ ಸಾಮ್ರಾಜ್ಯ ಕ್ರಿ.ಶ. 1565ರಲ್ಲಿ ರಕ್ಕಸ ತಂಗಡಿ ಯುದ್ಧದಲ್ಲಿ ಮುಸ್ಲಿಂ ದೊರೆಗಳಿಂದ ವಿನಾಶ ಹೊಂದಿತು. ಹಿಂದೂಗಳ ರಕ್ಷಣೆಯ ಜವಾಬ್ದಾರಿ ಮೈಸೂರು ದೊರೆಗಳ ಹೆಗಲ ಮೇಲೇರಿತು. ಮೈಸೂರು ಆ ಕೆಲಸವನ್ನು ನಿರ್ವಹಿಸಲು ಸಮರ್ಥವಾಗಿತ್ತು. ಏಕೆಂದರೆ ಆ ರಾಜರಿಗೆ, ಅವರ ದಿವಾನರಿಗೆ ದೂರದೃಷ್ಟಿ, ಆಳುವ ಕೌಶಲ್ಯ ಮಾತ್ರವಲ್ಲ ಅವರಿಗೆ ಕರ್ನಾಟಕದ ಬಗ್ಗೆ ಸ್ಪಷ್ಟ ಕಲ್ಪನೆಯಿತ್ತು. ಕರ್ನಾಟಕದ ಪುನರುತ್ಥಾನಕ್ಕೆ ಅದು ಕೇಂದ್ರ ಬಿಂದುವಾಯಿತು. ಆ ಕಾರಣದಿಂದಲೇ ಮೈಸೂರು ರಾಜರ ಚರಿತ್ರೆಗೆ ಕರ್ನಾಟಕದ ಇತಿಹಾಸದಲ್ಲಿ ಪ್ರಮುಖ ಸ್ಥಾನವಿದೆ.

ಮೈಸೂರು ಅರಸರ ಇತಿಹಾಸ (1610–1950) ರಾಜ ಒಡೆಯರಿಂದ ಆರಂಭವಾಗುತ್ತದೆ. ವಿಜಯನಗರ ಸಾಮ್ರಾಜ್ಯವು ಪತನ ಹೊಂದಿದ ಮೇಲೆ ಆ ರಾಜ ವಂಶದ ದೊರೆಗಳು, ಪೆನುಗೊಂಡ, ಚಂದ್ರಗಿರಿ ಇತ್ಯಾದಿ ಸ್ಥಳಗಳಿಂದ ಆಳುತ್ತಿರುವಾಗ ವಿಜಯನಗರ ಚಕ್ರವರ್ತಿಗಳಿಗೆ ನಿಷ್ಠರಾಗಿದ್ದ ರಾಜ ಒಡೆಯರನ್ನು ಕ್ರಿ. ಶ. 1610ರಲ್ಲಿ ವಿಜಯನಗರದ ವಂಶಸ್ಥರು ಶ್ರೀರಂಗಪಟ್ಟಣದಲ್ಲಿ ತಮ್ಮ ಪ್ರತಿನಿಧಿಯಾಗಿ ನೇಮಕ ಮಾಡಿದರು. ವಿಜಯನಗರ ದೊರೆಗಳಂತೆ ದಸರಾ ಹಬ್ಬವನ್ನು ಶ್ರೀರಂಗಪಟ್ಟಣದ ದೊರೆ ಮುಂದುವರಿಸಿದನು. ಮುಂದೆ ಕಂಠೀರವ ನರಸರಾಜ ಒಡೆಯರು (1638–59) ತನ್ನ ರಾಜ್ಯದ ಮೇಲೆ ಧಾಳಿಮಾಡಿದ ಬಿಜಾಪುರದ ಆದಿಲ್‌ಶಾಹಿಯನ್ನು ಓಡಿಸಿದನು. ಇಂತಹ ಅನೇಕ ಶತ್ರುಗಳನ್ನು ಸೋಲಿಸಿ ತನ್ನ ದಿಗ್ವಿಜಯಗಳ ಮೂಲಕ ಮೈಸೂರು ರಾಜ್ಯದ ಗಡಿಗಳನ್ನು ವಿಸ್ತರಿಸಿದನು. ಅವನ ಕಾಲದಲ್ಲಿ ಮೈಸೂರು ರಾಜ್ಯದಲ್ಲಿ ಶಾಂತಿ ನೆಲೆಸಿತು. ತನ್ನ ನಾಣ್ಯ ಕಮ್ಮಟದಲ್ಲಿ 'ಕಂಠೀರವ' ನಾಣ್ಯಗಳನ್ನು ಮಾಡಿಸಿ ಬದಲಾವಣೆ ತಂದ. ಕ್ರಿ.ಶ. 1646ಲ್ಲಿ ತನ್ನ ರಕ್ಷಣೆ ಕೇಳಿದ ವಿಜಯನಗರದ ದೊರೆ ಶ್ರೀರಂಗನಿಗೆ ಆಶ್ರಯ ನೀಡಿದ. ಇವನ ಬಳಿಕ ಬಂದ ದೊಡ್ಡ ದೇವರಾಜ (1659–

72) ಮದುರೆಯ ನಾಯಕನನ್ನು ಹಿಮ್ಮೆಟ್ಟಿಸಿ ಈರೋಡನ್ನು ಸ್ವಾಧೀನ ಮಾಡಿಕೊಂಡ. ಇವನ ಕಾಲದಲ್ಲಿ ಶ್ರೀರಂಗರಾಯನು ಮೈಸೂರು ತ್ಯಜಿಸಿ ಕೆಳದಿ ನಾಯಕರಲ್ಲಿ ಆಶ್ರಯ ಪಡೆದನು. ಶ್ರೀರಂಗರಾಯನು ನೆಪ ಒಡ್ಡಿ ಮೈಸೂರು ರಾಜ್ಯದ ಮೇಲೆ ಧಾಳಿ ಮಾಡಿದ ಕೆಳದಿ ದೊರೆಯನ್ನು ಓಡಿಸಿ ಅವನು ಹಾಸನ, ಸಕ್ಕರೆಪಟ್ಟಣಗಳನ್ನು ವಶಪಡಿಸಿಕೊಂಡ.

ಅವನ ಬಳಿಕ ಬಂದ ಚಿಕ್ಕದೇವರಾಜನು (1672–1704) ಮೈಸೂರನ್ನು ಬಹುವಾಗಿ ಅಭಿವೃದ್ಧಿ ಪಡಿಸಿದ. ಮೊಘಲರು, ಮರಾಠರು, ಬಿಜಾಪುರದ ಆದಿಲ್‌ಶಾಹಾಗಳ ಮಧ್ಯೆ ಇದ್ದ ತಿಕ್ಕಾಟಗಳನ್ನು ಉಪಯೋಗಿಸಿಕೊಂಡು ಚಿಕ್ಕಮಗಳೂರು, ಹಾಸನ ಜಿಲ್ಲೆಗಳವರೆಗೆ ತನ್ನ ಗಡಿ ವಿಸ್ತರಿಸಿದನು. ಅವನ ಕಾಲದಲ್ಲಿ ಮರಾಠರ ವಶದಲ್ಲಿದ್ದ ಬೆಂಗಳೂರನ್ನು ಮುಘಲ್ ರಾಯಭಾರಿ ಕಾಸೀಖಾನ್ ವಶಪಡಿಸಿಕೊಂಡ. ಅವನನ್ನು ಒಪ್ಪಿಸಿ ಮೂರು ಲಕ್ಷ ರೂಪಾಯಿ ನೀಡಿ ಬೆಂಗಳೂರನ್ನು ಕೊಂಡುಕೊಂಡ. ಡೆಕ್ಕನ್ನಿನ ಸುಲ್ತಾನರ ಆಡಳಿತ ಕೊನೆಗೊಳ್ಳುವ ಸೂಚನೆ ತಿಳಿದು ಅವರ ಜೊತೆ ಸ್ನೇಹವನ್ನು ಉಳಿಸಿಕೊಂಡ. 1699ರಲ್ಲಿ ಅವನು ಔರಂಗಜೇಬನ ಬಳಿಗೆ ತನ್ನ ರಾಯಭಾರಿ ಕಳುಹಿಸಿದಾಗ ಔರಂಗಜೇಬನು ಅವನಿಗೆ 'ಜುಗ್ ದೇವ್ ರಾಯ್' (ಜಗದೇವರಾಯ) ಎಂಬ ಬಿರುದನ್ನು ನೀಡಿದ. ಅವನು ಕುಮಾರಯ್ಯ ಎಂಬುವನ ನೇತೃತ್ವದಲ್ಲಿ ಸೈನ್ಯವನ್ನು ಕಳುಹಿಸಿ ತಿರುಚನಾಪಳ್ಳಿಯನ್ನು ವಶಪಡಿಸಿಕೊಂಡನು. ಅವನ ಕಾಲದ ಮೈಸೂರು ರಾಜ್ಯದ ಗಡಿಗಳು ಇವು: ಉತ್ತರದಲ್ಲಿ ಚಿಕ್ಕಮಗಳೂರಿನ ಪರ್ವತಶ್ರೇಣಿ ಮತ್ತು ತುಮಕೂರು ಜಿಲ್ಲೆ, ದಕ್ಷಿಣದಲ್ಲಿ ಅಣ್ಣಾಮಲೈ, ಪೂರ್ವದಲ್ಲಿ ಸೇಲಂ, ಪಶ್ಚಿಮದಲ್ಲಿ ಬೇಲೂರು, ಕೊಡಗು. 'ಅಪ್ರತಿಮವೀರ' ಎಂದೇ ಖ್ಯಾತನಾಗಿದ್ದ ಅವನಿಗೆ ಮಹಾರಾಜಾಧಿಕರಾಜ ಇತ್ಯಾದಿ ಚಕ್ರವರ್ತಿ ಸೂಚಕ ಬಿರುದುಗಳಿದ್ದವು.

ಚಿಕ್ಕದೇವರಾಯನ ಬಳಿಕ ರಾಜಕೀಯ ಪರಿಸ್ಥಿತಿ ಶೋಚನೀಯ ಸ್ಥಿತಿ ಪಡೆಯಿತು. ಉತ್ತರದ ಪರಿಸ್ಥಿತಿಯು ದಕ್ಷಿಣದಲ್ಲಿ ಇಣುಕಿಹಾಕಿತು. ಮುಘಲರ ರಾಜ್ಯದ ಗಡಿಗಳು ಇಡೀ ದಕ್ಷಿಣ ಭಾರತದಲ್ಲಿ ಪಶ್ಚಿಮತೀರದಿಂದ ಪೂರ್ವತೀರದವರೆಗೆ ವಿಸ್ತರಿಸಿದವು. ಆ ಪ್ರದೇಶವನ್ನು ಚಿಕ್ಕ ರಾಜ್ಯಗಳನ್ನಾಗಿ ವಿಂಗಡಿಸಿ ಅದಕ್ಕೆ ಒಬ್ಬೊಬ್ಬ ಆಡಳತಾಧಿಕಾರಿಯನ್ನು ನೇಮಕಮಾಡಲಾಯಿತು. ಅವರು ಒಬ್ಬ ನವಾಬನಿಗೆ ವಿಧೇಯರಾಗಿದ್ದರು. ಒಂದು ರಾಜ್ಯದ ರಾಜಧಾನಿ ಸಿರಾ; ಇನ್ನೊಂದರ ರಾಜಧಾನಿ ಆರ್ಕಾಟು. ಆರ್ಕಾಟ್ ರಾಜಧಾನಿಯಾಗಿದ್ದ ಪ್ರದೇಶವನ್ನು (ಮದ್ರಾಸಿನ ದಕ್ಷಿಣದ ಕಡಲ ತೀರದ ಜಿಲ್ಲೆಗಳು) 'ಕರ್ನಾಟಿಕ್' ಎಂದು ತಪ್ಪಾಗಿ ಕರೆಯಲಾಯ್ತು. ಎರಡು ಕರ್ನಾಟಿಕ್ ಯುದ್ಧಗಳ ಬಳಿಕ ಬ್ರಿಟಿಷರಿಗೂ, ಫ್ರೆಂಚರಿಗೂ, ಹೋರಾಟ ನಡೆದು ಬ್ರಿಟೀಷರು ಜಯಶಾಲಿಯಾದರು (1754). ಉತ್ತರ ಭಾರತವನ್ನು ಗೆಲ್ಲಲು ಮರಾಠರು ಯತ್ನಿಸಿ, 1761ರ ಪಾಣಿಪತ್ ಯುದ್ಧದಲ್ಲಿ ಸೋತುದರಿಂದ ಅವರ ಗಮನ ದಕ್ಷಿಣ ಭಾರತದ ಕಡೆ ಹರಿಯಿತು. ಹೊಸದಾಗಿ ರಾಜ್ಯ ಪಡೆದುಕೊಂಡ



ಹೈದರಾಬಾದಿನ ನಿಜಾಮ ಮತ್ತು ಮರಾಠರು ಐಶ್ವರ್ಯಭರಿತವಾಗಿದ್ದ ಮೈಸೂರು ರಾಜ್ಯದ ಕಡೆ ಗಮನ ಹರಿಸಿ ಅದನ್ನು ವಶಪಡಿಸಿಕೊಳ್ಳಲು ಯತ್ನಿಸಿದರು.

ಚಿಕ್ಕದೇವರಾಯನ ಉತ್ತರಾಧಿಕಾರಿಗಳು ದುರ್ಬಲರಾಗಿದ್ದರಿಂದ ಅವರ ಅಧಿಕಾರವನ್ನು ದಳವಾಯಿಗಳು (ಸೇನಾ ಮುಖಂಡರು) ಅಪಹರಿಸಿದರು. ದೊಡ್ಡ ರಾಜ ಒಡೆಯರ್‌ಗೆ (1713–1731) ಆಳುವುದು ಕಷ್ಟವಾದಾಗ ದಳವಾಯಿಗೆ ಎಲ್ಲ ಅಧಿಕಾರವನ್ನು ನೀಡಿದ್ದರಿಂದ ಅವನು ರಾಜನ ಕೈ ಕೆಳಗಿನ ಮುಖ್ಯ ಆಡಳಿತಗಾರನಾದ. ಒಬ್ಬ ದಳವಾಯಿ ದುರ್ಬಲನಾದರೆ ಮುಂದಿನ ದಳವಾಯಿ ಪ್ರಬಲನಾಗುತ್ತಿದ್ದ. ಈ ಅಧಿಕಾರಾಪಹರಣದಿಂದ ರಾಜ್ಯದ ಖಜಾನೆ ಬರಿದಾಗಿ ಅರಾಜಕತೆ ಮೂಡಿತು. ಅದು ಶತ್ರುಗಳು ಮೈಸೂರು ರಾಜ್ಯಕ್ಕೆ ನುಗ್ಗಲು ಅವಕಾಶ ಮಾಡಿಕೊಟ್ಟಿತು.

## ಹೈದರ್ ಮತ್ತು ಟಿಪ್ಪು.

ಇಂತಹ ಅರಾಜಕ ಸ್ಥಿತಿಯಲ್ಲಿ ಹೈದರಾಲಿಯ ರಾಜಕೀಯ ಪ್ರತಿಭೆಯ ಕಾರ್ಯಾರಂಭವಾಯಿತು. 1721ರಲ್ಲಿ ಬಡ ಕುಟುಂಬವೊಂದರಲ್ಲಿ ಜನಿಸಿದ ಅವನ ತಂದೆ ಒಬ್ಬ ಸೈನಿಕ. ಅವನ ಬಾಲ್ಯ ಜೀವನ ಕಷ್ಟಗಳಿಂದ ತುಂಬಿದ್ದು, ಅವನು ಕೊನೆಯವರೆಗೆ ಅನಕ್ಷರಸ್ಥನಾಗಿ ಉಳಿದ. ಕೇವಲ ಸೈನಿಕನಾಗಿದ್ದ ತನ್ನ ಪ್ರತಿಭೆ, ಧೈರ್ಯಗಳಿಗಾಗಿ ಪ್ರಮುಖ ಸ್ಥಾನವನ್ನು ಪಡೆದ. ಅವನು ಭಾಗವಹಿಸಿದ್ದ ಯುದ್ಧಗಳಿಂದಾಗಿ ಸಮರ್ಥ ನಾಯಕನೆನ್ನಿಸಿಕೊಂಡ. 1758ರಲ್ಲಿ ರಾಜಧಾನಿಯನ್ನು ವಶಪಡಿಸಿಕೊಳ್ಳುವುದಾಗಿ ಮರಾಠರು ಬೆದರಿಕೆ ಹಾಕಿದಾಗ ಮೈಸೂರು ಸೈನ್ಯದ ಸೈನಿಕರಿಗೆ ಕೊಡಬೇಕಾಗಿದ್ದ ಬಾಕಿ ಸಂಬಳವನ್ನು ಕೊಡಿಸಿ ಆ ಸೈನ್ಯದ ರಕ್ಷಕನೆನ್ನಿಸಿಕೊಂಡ. ಸರ್ವಾಧಿಕಾರಿ ದಳವಾಯಿ ಖಂಡೇರಾಯನನ್ನು ರಾಜಕೀಯದಿಂದ ನಿವೃತ್ತಗೊಳಿಸಿ ತನ್ನ ವಿರುದ್ಧ ತಂತ್ರ ಹೊಡಿದ ದಿವಾನ್ ಖಂಡೇರಾಯನನ್ನು ಮೂಲೆಗುಂಪು ಮಾಡಿದ. ಇದರಿಂದಾಗಿ ಅವನು ರಾಜ್ಯದ ಅತ್ಯುನ್ನತ ಯಜಮಾನ (Supreme Master) ಎನ್ನಿಸಿಕೊಂಡ. ಅವನ ಆಡಳಿತಾವಧಿಯಲ್ಲಿ (1761–82) ಮೈಸೂರು ರಾಜ್ಯದಲ್ಲಿ ಶಾಂತಿ, ಸುಭಿಕ್ಷ ನೆಲಸಿದವು. ತನ್ನ ಅಭ್ಯುದಯವನ್ನು ಸಹಿಸದ ನಿಜಾಮ, ಮರಾಠರು, ಇಂಗ್ಲಿಷರ ಜೊತೆ ಯುದ್ಧ ಮಾಡಿದ. ವಿಶೇಷವಾಗಿ ಇಂಗ್ಲಿಷರ ಬಗ್ಗೆ ಆತನ ದ್ವೇಷ ಬೆಳೆಯಿತು. ಅವರ ಜೊತೆ 1769, 1780ರಲ್ಲಿ ಎರಡು ಬಾರಿ ಯುದ್ಧಮಾಡಿದ. ಮೈಸೂರು ರಾಜ್ಯದ ಗಡಿಗಳನ್ನು ವಿಸ್ತರಿಸಿ ಮೈಸೂರು ರಾಜ್ಯಕ್ಕೆ ಬಹು ದೊಡ್ಡ ಶಕ್ತಿಯನ್ನು ತುಂಬಿದ್ದ ಮೈಸೂರು ರಾಜ್ಯವು ಅವನ ಕಾಲದಲ್ಲಿ ತುಂಗಭದ್ರೆಯನ್ನು ದಾಟಿ ಕೃಷ್ಣಾವರೆಗೆ ವ್ಯಾಪಿಸಿತ್ತು. ಅವನ ಹೆಸರು ಮೈಸೂರು ಚರಿತ್ರೆಯಲ್ಲಿ ಅಜರಾಮರ, ಮತ್ತು ಭಾರತದ ಚರಿತ್ರೆಯಲ್ಲಿ ಉಲ್ಲೇಖಾರ್ಹ.

ಅವನ ಸಾವಿನ ಬಳಿಕ ಟಿಪ್ಪು ಮೈಸೂರಿನ ದೊರೆಯಾದ (1782–99) ತನ್ನ ಆಡಳತಾವಧಿಯಲ್ಲೇ 'ಸುಲ್ತಾನ್' ಎಂಬ ಬಿರುದನ್ನು ತನ್ನ ಹೆಸರಿನ ಜೊತೆ ಸೇರಿಸಿಕೊಂಡ.

ಅವನು ಉತ್ಸಾಹಶಾಲಿ, ಧೈರ್ಯಶಾಲಿ, ಆದರೆ ಒರಟ ಮತ್ತು ತಾಳ್ಮೆರಹಿತ. ತನ್ನ ತಂದೆಯಂತೆಯೇ ಅವನು ಇಂಗ್ಲಿಷರ ಮೇಲೆ ದ್ವೇಷ ಸಾಧಿಸಿ ಅವರನ್ನು ಸೋಲಿಸಿ ರಾಜ್ಯದಿಂದ ಹೊರಹಾಕಲು ನಿರ್ಧರಿಸಿದ. ಇಂಗ್ಲಿಷರನ್ನು ದ್ವೇಷಿಸುತ್ತಿದ್ದ ಫ್ರೆಂಚರ ಸಹಾಯವನ್ನು ಕೇಳಿದ್ದ. ಆಗಲೇ ತಮ್ಮದೇ ಆದ ಮಹಾ ಸಾಮ್ರಾಜ್ಯವನ್ನು ಕಟ್ಟಲು ಬ್ರಿಟಿಷರು ದಾಪುಗಾಲು ಹಾಕಿದ್ದರು. ಇಂಗ್ಲಿಷರು ಫ್ರೆಂಚರನ್ನೂ ಮತ್ತು ಟಿಪ್ಪು ಬಲಾಢ್ಯವಾಗುತ್ತಿದ್ದುದನ್ನು ಗಮನಿಸಿ ಇಬ್ಬರನ್ನೂ ಕೊನೆಗಾಣಿಸಲು ನಿರ್ಧರಿಸಿದರು.

ಯುದ್ಧದಿಂದಲೇ ಆರಂಭಗೊಂಡ ಟಿಪ್ಪು ಆಳ್ವಿಕೆ ಯುದ್ಧದಿಂದಲೇ ಕೊನೆಗೊಂಡಿತು. ನಿಜಾಮ ಮತ್ತು ಮರಾಠರೊಡನೆ ಶಾಮೀಲಾಗಿದ್ದ ಬ್ರಿಟಿಷರು ಟಿಪ್ಪು ವಿರುದ್ಧ ಎರಡುಬಾರಿ ಯುದ್ಧ ಮಾಡಿದರು. ಎರಡು ಬಾರಿಯೂ ಬ್ರಿಟಿಷರು ಅವನ ರಾಜಧಾನಿ ಶ್ರೀರಂಗಪಟ್ಟಣವನ್ನು ಆಕ್ರಮಿಸಿದ್ದರು. ಮೊದಲ 1792ರ ಯುದ್ಧದಲ್ಲಿ ಟಿಪ್ಪು ಸೋತು 33 ಮಿಲಿಯನ್ ರೂ.ಗಳನ್ನು ತೆರಬೇಕಾಯಿತಲ್ಲದೇ ತನ್ನ ಅರ್ಧ ರಾಜ್ಯವನ್ನು ಬ್ರಿಟಿಷರಿಗೆ ಒಪ್ಪಿಸಿದ. ಎರಡನೆಯ 1799ರ ಯುದ್ಧದಲ್ಲಿ ಅವನು ಧೈರ್ಯದಿಂದ ಹೋರಾಡಿ ಪ್ರಾಣ ತೆತ್ತ.

ಟಿಪ್ಪು ಒಬ್ಬ ನಿರ್ಭೀತ ಹೋರಾಟಗಾರನಾಗಿದ್ದರೂ ಧೀರ ಸೇನಾನಾಯಕನಾಗಿದ್ದರೂ, ಅವನು ದುರ್ಬಲ ಆಡಳಿತಗಾರನಾಗಿದ್ದ. ಮುಂದಾಲೋಚನೆಯ ಸ್ವಭಾವ, ತಂತ್ರಗಾರಿಕೆ ಇಲ್ಲದ್ದರಿಂದ ಅವನೇ ಶತ್ರುಗಳನ್ನು ಸೃಷ್ಟಿಸಿಕೊಂಡ. ಅವನು ಮತಾಂಧನಾಗಿದ್ದರೂ ತನ್ನ ರಾಜ್ಯವನ್ನು ಉತ್ತಮಪಡಿಸಲು ಪ್ರಾಮಾಣಿಕ ಯತ್ನವನ್ನು ಮಾಡಿದ ("Though begotted, he was an englightened ruler and made sincere efforts to improve his state"). ಅವನು ರಸ್ತೆಗಳು, ಕೆರೆಗಳನ್ನು ಅಣೆಕಟ್ಟುಗಳನ್ನು ನೀರಾವರಿಗಾಗಿ ನಿರ್ಮಿಸಿ ಯೂರೋಪ್ ಮಾದರಿಯಲ್ಲಿ ಸೈನ್ಯವನ್ನು ಕಟ್ಟಿದ. ಹಲವು ಕಾರ್ಖಾನೆಗಳನ್ನು ಆರಂಭಿಸಿದ. ಅವನು ಒಮಾನ್, ಪರ್ಷಿಯ, ಟರ್ಕಿಗಳಿಗೆ ತನ್ನ ವ್ಯಾಪಾರೀ ಪ್ರತಿನಿಧಿಗಳನ್ನು ಕಳುಹಿಸಿಕೊಟ್ಟಿದ್ದ.

ಹೈದರ್, ಟಿಪ್ಪುಗಳ ಏಳು ಎಷ್ಟು ಕ್ಷಿಪ್ರವೋ ಬೀಳೂ, ಅಷ್ಟೇ ಕ್ಷಿಪ್ರವಾಯಿತು. ಅವರೊಡನೆ ಮೈಸೂರು ಸಿಂಹಾಸನದ ಅಪಹರಣವು ಕೊನೆಯನ್ನು ಕಂಡಿತು ("With the meteor like rise and fall of Haider and Tippu, the **usurpation** of Mysore throne ended"). ನಲವತ್ತು ವರ್ಷಗಳು (1761–99) ನಿಂತು ಹೋಗಿದ್ದ ಮೈಸೂರು ಮನೆತನದ ಆಡಳಿತವು ಮತ್ತೆ ಆರಂಭವಾಯಿತು. ಮಡಿದ ರಾಜನ ವಿಧವೆ ರಾಣಿ ಲಕ್ಷ್ಮಿ ಅಮ್ಮಣ್ಣಿ ದೇವಿಯ ದತ್ತು ಪುತ್ರ ಮುಮ್ಮಡಿ ಕೃಷ್ಣರಾಜ ಚಿಕ್ಕ ವಯಸ್ಸಿನವನಾಗಿದ್ದುದರಿಂದ ಅವನು ಪ್ರಬುದ್ಧನಾಗುವರೆಗೆ ಹೈದರ್–ಟಿಪ್ಪು ಬಳಿಕ. ದಿವಾನರಾಗಿದ್ದ ಪೂರ್ಣಯ್ಯ ಆಡಳಿತವನ್ನು ನೋಡಿಕೊಂಡರು.



ಟಿಪ್ಪುವಿನ ಯುದ್ಧಗಳು ಕರ್ನಾಟಕದ ಐಕ್ಯವನ್ನು ಭಂಗಗೊಳಿಸಿದವು. ಅದು ಮರಾಠರು, ನಿಜಾಮ ಮತ್ತು ಇಂಗ್ಲೀಷರ ವಶವಾಯ್ತು. ಆಯಾ ರಾಜರಿಗೆ ವಿತರಣೆಯಾದ್ದರಿಂದ ಕರ್ನಾಟಕ ಒಡೆಯಿತು. ಕನ್ನಡಿಗರೂ ಛಿದ್ರ ಛಿದ್ರವಾದರು. ಕರಾವಳಿ ಜಿಲ್ಲೆಗಳನ್ನು ಇಂಗ್ಲೀಷರು ತಮ್ಮ ವಶದಲ್ಲಿಟ್ಟುಕೊಂಡರು ಈಶಾನ್ಯ ಜಿಲ್ಲೆಗಳಾದ ಬೀದರ್, ಗುಲ್ಬರ್ಗಾ, ರಾಯಚೂರುಗಳನ್ನು ನಿಜಾಮನಿಗೆ ನೀಡಲಾಯ್ತು. ಉತ್ತರದ ಬಿಜಾಪುರ, ಬೆಳಗಾವಿ, ಧಾರವಾಡಗಳು ಮರಾಠರ ಪತನದ ನಂತರ ಮುಂಬೈ ಪ್ರಾಂತ್ಯಕ್ಕೆ ಸೇರಿದವು.

ಈ ವಿಭಜನೆ ಕನ್ನಡ ಜನರ ಭವಿಷ್ಯದ ಮೇಲೆ ಮಾರಕ ಪ್ರಭಾವವುಂಟುಮಾಡಿತು. ಪ್ರಾಚೀನ ಕಾಲದಿಂದ ತನ್ನದೇ ಸ್ವತಂತ್ರ ವ್ಯಕ್ತಿತ್ವವನ್ನು ಹೊಂದಿ ಉದಾತ್ತ ಪರಂಪರೆ ಸಂಸ್ಕೃತಿಯನ್ನು ಬೆಳಸಿದ್ದ ಕರ್ನಾಟಕ ಯಾವುದೇ ಒಳ್ಳೆಯ ಧ್ಯೇಯವು ಇಲ್ಲದ ವಿಭಜನೆಗೆ ಒಳಗಾಯ್ತು. ಉತ್ತರದಲ್ಲಿ ಮಹಾರಾಷ್ಟ್ರದ ಅಧೀನದಲ್ಲಿದ್ದ ಕನ್ನಡಿಗರು ತಮ್ಮ ಅಸ್ಮಿತೆಯನ್ನು ಕಳೆದುಕೊಂಡರೆ ನಿಜಾಮನ ಆಡಳಿತದ ವಶದಲ್ಲಿದ್ದ ಪ್ರದೇಶದ ಕನ್ನಡಿಗರು ಮುಸ್ಲಿಂ ಭಾಷೆ, ಸಂಸ್ಕೃತಿ, ಸಂಪ್ರದಾಯಗಳ ಕಾಲ್ತುಳಿತಕ್ಕೆ ಒಳಗಾದರು. ಮೈಸೂರು ಪ್ರದೇಶವು ಕರಾವಳಿ ಪ್ರದೇಶದ ಅನುಕೂಲಗಳಿಂದ ವಂಚಿತವಾಯ್ತು. ವಿದೇಶಗಳ ಜೊತೆ ವ್ಯಾಪಾರ ಸಂಬಂಧ ತಪ್ಪಿತು. ಸುಂದರ ವನಸಿರಿಯ ಭೂಪ್ರದೇಶ ಕೊಡಗನ್ನು ಬ್ರಿಟೀಷರು ಪ್ರತ್ಯೇಕ ಕಮೀಷನರ್ ಪ್ರಾಂತವಾಗಿ ಉಳಿಸಿಕೊಂಡರು. ದಕ್ಷಿಣ ಭಾಗದ ಪೂರ್ವ, ಪಶ್ಚಿಮ ಪ್ರದೇಶಗಳನ್ನು ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಿದ್ದರಿಂದ ಅಲ್ಲಿನವರು ತೆಲುಗು ತಮಿಳು ಮಲಯಾಳಿ ಭಾಷೆಗಳ, ಸಂಪ್ರದಾಯಗಳ ಅಧೀನಕ್ಕೆ ಒಳಪಟ್ಟರು. ದಕ್ಷಿಣ ಭಾರತದಲ್ಲಿ ಬಹುವ್ಯಾಪಕವಾಗಿ ಹರಡಿದ್ದ ಕನ್ನಡಿಗರ ಸಂಸ್ಕೃತಿಯು ಮೈಸೂರು ರಾಜ್ಯದ ಎಂಟು ಜಿಲ್ಲೆಗಳಿಗೆ ಸೀಮಿತವಾಗಿ ಮಹಾರಾಜರನ್ನು ಆಶ್ರಯಿಸಿತು. ಅವರು ನಮ್ಮ ಸಂಸ್ಕೃತಿ, ಪರಂಪರೆಗಳನ್ನು ಉಳಿಸಿ ಬೆಳೆಸುವಂತಹ ಕಾಲ ಬಂದಿತು. (ಮೇಲಿನದು ಶ್ರೇಷ್ಠ ಇತಿಹಾಸಕಾರರಾದ ಡಾ. ದೇಸಾಯಿ, ಡಾ. ರಿತ್ತಿ, ಡಾ. ಗೋಪಾಲ್ ರಚಿಸಿರುವ A History of Karnataka ಕೃತಿಯ ಪು. 430–436ರ ಯಥಾವತ್ತಾದ ಸಾರಾಂಶ).

ಇದು ಶ್ರೇಷ್ಠ ವಿದ್ವಾಂಸರಾದ ಡಾ. ದೇಸಾಯಿ, ಡಾ. ರಿತ್ತಿ, ಡಾ. ಗೋಪಾಲ್ ಇಂಗ್ಲೀಷ್ ಬರಹದ ಕನ್ನಡ ಸಾರಾಂಶ – ಅವರ ಅಭಿಪ್ರಾಯಗಳನ್ನು ಹಾಗೇ ಉಳಿಸಿದ್ದೇನೆ. ಅವರು ಒಟ್ಟಾರೆ ಕರ್ನಾಟಕದ ಚರಿತ್ರೆಯನ್ನು ಸ್ಥೂಲವಾಗಿ ಸಮೀಕ್ಷಿಸಿದ್ದಾರೆಯೇ ಹೊರತು ಪ್ರತಿಯೊಂದಕ್ಕೂ ಆಧಾರಗಳನ್ನು ನೀಡದಿದ್ದರೂ ಬಹುತೇಕ ಸತ್ಯವನ್ನೇ ಹೇಳಿದ್ದಾರೆ. ಅವರದು ಟಿಪ್ಪುವಿನ ಸ್ಥೂಲ ಅಧ್ಯಯನ (Macro study); ಅವನನ್ನು ಸೂಕ್ಷ್ಮವಾಗಿ ಅಧ್ಯಯನ (Micro study) ಮಾಡಿದರೆ ಮೂಡುವ ನಿಜ ಚಿತ್ರವನ್ನು ಸೂಕ್ಷ್ಮವಾಗಿ ಅವರು ಸೂಚಿಸಿದ್ದಾರೆ. ಅವನೊಬ್ಬ ಹಠಮಾರಿ, ವಿವೇಚನರಹಿತ, ಮತಾಂಧ (Begotted) ಎಂದೇ ಅವರು ಹೇಳಿದ್ದಾರೆ (ಇದನ್ನು ಡಾ. ಶ್ರೀನಿವಾಸ ರಿತ್ತಿಯವರಿಗೂ ದೂರವಾಣಿ ಮೂಲಕ ತಿಳಿಸಿದ್ದೇನೆ.

ಟಿಪ್ಪುವಿನ ನಿಜ ಚಿತ್ರವನ್ನು ಕೊಡುವ ನನ್ನ ಅಧ್ಯಯನ ಅದನ್ನು ಸ್ಪಷ್ಟವಾಗಿ ಬಿಚ್ಚಿಡುತ್ತದೆ. ವಿವರಗಳಿಗೆ ಮುಂದೆ ನೋಡಿ.

ಈ ಕೃತಿಯ ಮುಖ್ಯ ಉದ್ದೇಶ: ಟಿಪ್ಪುವಿನ ನಿಜವಾದ ಅಂತರಂಗ ಏನು, ಅವನ ವಾಸ್ತವಿಕ ಧೋರಣೆಯ ಸ್ವರೂಪ ಏನು ಎಂಬುದನ್ನು ಅವನ ಮೂಲ ದಾಖಲೆಗಳನ್ನು ಅವಲಂಬಿಸಿ ಸ್ಪಷ್ಟಪಡಿಸುವುದು. ಈಚಿನ ಅವರಿವರು ಏನು ಹೇಳಿದ್ದಾರೆ ಎಂಬುದನ್ನೂ ನಾನು ಗಮನಿಸಿದ್ದೇನೆ; ಸಾಕಷ್ಟು ಕೃತಿಗಳನ್ನೂ ಗಮನಿಸಿದ್ದೇನೆ. ಈ ಕೃತಿಯಲ್ಲಿ ನಾನು ಹೇಳಿದ್ದರಲ್ಲಿ ಹೊಸತೇನೂ ಇಲ್ಲ – ಇದು ಆ ದೃಷ್ಟಿಯಿಂದ 'ಸಂಶೋಧನ ಕೃತಿ' ಅಲ್ಲ. ಓದುಗರಿಗೆ ಅವನ ಮರ್ಮವನ್ನು ಸ್ಪಷ್ಟಪಡಿಸುವುದು ನನ್ನ ಗುರಿ.

❋ ❋ ❋ ❋

## 2. ಕೆಲವು ಟಿಪ್ಪು ಪರ–ವಿರೋಧ ಬರಹಗಳು

ಈ ಭಾಗದಲ್ಲಿ ಮುಖ್ಯವಾಗಿ ಗೌರಿ ಸುಂದರ್ ಸಂಪಾದಕತ್ವದಲ್ಲಿ ಪ್ರಕಟವಾಗಿರುವ "ಟಿಪ್ಪು ಸುಲ್ತಾನ್ ಕನ್ನಡ ದ್ರೋಹಿಯೆ" (ವಿಚಾರಾತ್ಮಕ ಲೇಖನಗಳ ಸಂಪುಟ 2006) ಎಂಬ ಕೃತಿಯಲ್ಲಿನ ಕೆಲವರ ಬರಹಗಳನ್ನು ಉದಾಹರಿಸಿದ್ದೇನೆ.

1. 'ಟಿಪ್ಪು ಕನ್ನಡ ದ್ರೋಹಿ ಎಂದು ಹೇಳಲು ಹೊಸ ಪುರಾವೆ ಇಲ್ಲ. ಆದರೆ ಆತ ಹಿಂದೂ ದ್ರೋಹಿ ಎಂಬ ಪುರಾವೆಗಳಿವೆ: ಗೌರಿ ಸುಂದರ್. ಪುಟ xi

2. "ಟೀಪೂ ಪ್ರಜಾಪರ. ಆದರೆ ಕನ್ನಡ ಪರ ಅಲ್ಲ"
   – ಕೆ. ಎಸ್. ಭಗವಾನ್. ಪು 1

3. "ಪರಕೀಯ ದಾಳಿ ಇಕ್ಕಿ ಮೆಟ್ಟಿದನ
   ನೀರಾವರಿ ಯೋಜನೆ ಕೈಗೆತ್ತಿಗೊಂಡನ
   ಊರೂರಲ್ಲಿ ಕೆರೆಕಟ್ಟೆ ನಿರ್ಮಾಣ ಮಾಡುತ್ತಾ
   ರೈತರ ಬವಣೆಗೆ ಸಾಂತ್ವನ ಹೇಳಿದನ
   ನೀರಿನ್ಯಾಗೆ ಹುದುಗ್ಯಾನ ಬೆಳೆಯಾಗಿ ಅರಳ್ಯಾನ
   ನಮ್ಮ ಮೈಸೂರು ಹುಲಿಯಾದ ಟಿಪ್ಪು ಸುಲ್ತಾನ್!

   ನಮ್ಮ ಟಿಪ್ಪು ಸುಲ್ತಾನ್ ಅಪರಂಜಿ ಚಿನ್ನ
   ಸ್ವಾತಂತ್ರ್ಯ ಕಹಳೆಯ ಮೊಳಗಿಸಿದನ
   ಕತ್ತರಿಸಿ ಹಾಕಿದನ ಮನು ಸಂವಿಧಾನ!
   ಆಂಗ್ಲರ ವಿರುದ್ಧ ಸಿಡಿದೆದ್ದನಾ
   ಹೋರಾಡಿ ಮಡಿದು ಹುತಾತ್ಮನಾದನ
   ನಮ್ಮ ಟಿಪ್ಪು ಸುಲ್ತಾನ ಜನಮನದಾಗೆ ಉಳಿದಾನ !"
   – ಡಾ॥ ದೊಡ್ಡರಂಗೇಗೌಡ. ಪು. 7

4. "ಆತನ ವೀರ ಮರಣವೂ ಕೂಡ, ಗಾಂಧೀಜಿಯ ಮರಣದಂತೆ ದೇಶದ್ರೋಹಿಗಳನ್ನು ಬೆನ್ನು ಹತ್ತುತ್ತಲೇ ಇದೆ".
   – ವಾರ್ತಾಭಾರತಿ, ಸಂಪಾದಕೀಯ. ಪು 9.

5. "ಟಿಪ್ಪು ಹಲವರ ದೃಷ್ಟಿಯಲ್ಲಿ ಏನೇನೋ ಆಗಿರಬಹುದು. ಆದರೆ ಕನ್ನಡವನ್ನು ಮುಂದುವರಿಸಿದ ಅವನನ್ನು ಕನ್ನಡ ದ್ರೋಹಿ ಎಂದು ಕರೆಯುವುದರ ಹಿಂದೆ ಒಂದು ಮತೀಯ ಕಾರಣವನ್ನು ಕಾಣುತ್ತಿದ್ದೇನೆ".

–ನಾ. ಡಿಸೋಜ. ಪು 21

6. "ಮೈಸೂರನ್ನು ಮುಸ್ಲಿಂ ಮತೀಯ ಸುಲ್ತಾನರು ಆಳುತ್ತಿದ್ದ ಕಾಲದಲ್ಲಿ, ಹಿಂದೂ ಮತೀಯರಿಗೆ, ಅದರಲ್ಲೂ ರಾಜ್ಯದಲ್ಲಿ ಅಧಿಕ ಸಂಖ್ಯಾತರಾದ ಕನ್ನಡಿಗರಿಗೆ ಅನ್ಯಾಯ ಮಾಡಲಿಲ್ಲವೆಂಬುದಕ್ಕೆ ಶ್ರೀರಂಗಪಟ್ಟಣದ ಒಂದು ಅತ್ಯುತ್ತಮ ದೃಶ್ಯವೇ ಸಾಕ್ಷಿಯಾಗಿದೆ. ಅಲ್ಲಿನ ಪ್ರಾಚೀನ ರಂಗನಾಥ ದೇವಾಲಯವು ಹಿಂದೂಗಳ ಕನ್ನಡಿಗರ ಅತ್ಯಂತ ಪವಿತ್ರ ಸ್ಥಳ. ಆ ದೇವಾಲಯಕ್ಕೆ ಸರೀ ಇದಿರಾಗಿ, ಅಲ್ಲಿ ಮೈಸೂರು ಸುಲ್ತಾನ ಟಿಪ್ಪು, ಕಟ್ಟಿಸಿದ, ಕಟ್ಟಿಸಿ ಅಲ್ಲಿ ವಿಶ್ರಾಂತಿ ಪಡೆಯಲು ಹೋಗುತ್ತಿದ್ದ ಒಂದು ಸುಂದರ ಭವನವಿದೆ. ಇಂದಿಗೂ ಅದು ಆಕರ್ಷಕವಾಗಿದೆ".

– ಡಾ॥ ಕೆ. ಕೆ. ರೈ. ಪು. 26

7. "ಇಂದಿಗೂ ದಕ್ಷಿಣ ಕನ್ನಡ ಜಿಲ್ಲೆಯ ಪುರಾತನ ಕ್ರಿಶ್ಚಿಯನ್ ಕುಟುಂಬಗಳಲ್ಲಿ ಮತ್ತು ಮಲಬಾರ್ ಪ್ರಾಂತ್ಯದ ನಾಯರ್ ಸಮುದಾಯದಲ್ಲಿ ಟಿಪ್ಪು ನಡೆಸಿದ ಹಿಂಸೆಯ ಹಾಗೂ ಮತಾಂತರದ ನೆನಪು ಹಾಗೆಯೇ ಉಳಿದಿದೆ. ಮಧ್ಯಕಾಲೀನ ಭಾರತದಲ್ಲಿ 'ಸ್ವರಾಜ್ಯ', 'ಮಿತ್ರ ರಾಜ್ಯ', 'ಶತ್ರುರಾಜ್ಯ' ಎಂಬ ಪ್ರಭಾವೀ ವೈಚಾರಿಕತೆಯನ್ನು ಸರಿ ಸುಮಾರು ಎಲ್ಲಾ ರಾಜ ಮಹಾರಾಜರು ಮತ್ತು ನವಾಬ ಸುಲ್ತಾನರೂ ಒಪ್ಪಿಕೊಂಡಿದ್ದರು. ಗೆದ್ದ ರಾಜ–ನವಾಬರು ಸೋತ ರಾಜ ನವಾಬರ ಮೇಲೆ ಮತ್ತು ಅವರ ಪ್ರಜೆಗಳ ಮೇಲೆ ಯಾವ ಬಗೆಯ ದೌರ್ಜನ್ಯವನ್ನು ಬೇಕಾದರೂ ನಡೆಸಬಹುದಿತ್ತು. ಮತ್ತು ಅವರು ಹಾಗೆಯೇ ನಡೆದುಕೊಳ್ಳುತ್ತಿದ್ದರು. ಈ ಮಾತು ಟಿಪ್ಪುವಿಗೆ ಎಷ್ಟು ಅನ್ವಯಿಸುತ್ತದೋ ಅಷ್ಟೇ ಅವನ ಸಮಕಾಲೀನ ಇತರ ರಾಜ–ನವಾಬ–ಸುಲ್ತಾನರಿಗ ಅನ್ವಯಿಸುತ್ತದೆ".

– ಡಾ. ಸಿ. ಎನ್. ರಾಮಚಂದ್ರನ್. ಪು 37.

8. "ರಾಜ್ಯದ ಇತಿಹಾಸವೇ ಗೊತ್ತಿಲ್ಲದವರಂತೆ ಮಾತನಾಡಿರುವ ಶಂಕರಮೂರ್ತಿ ಅವರನ್ನು ಶಿಕ್ಷಣ ಸಚಿವರು ಎನ್ನುವ ಬದಲು ಶಿಕ್ಷಣ ಶೂನ್ಯ ಸಚಿವ ಎಂದು ಕರೆಯುವುದೇ ಸೂಕ್ತ".

–ವೇದಾಂತ ಹೆಮ್ಮಿಗೆ. ಪು. 53.

9. "ಈ ದೇಶಕ್ಕೆ ಆದರ್ಶವಾಗಬೇಕಾದ ಟಿಪ್ಪು"

– ಕಲ್ಕುಳಿ ವಿಠ್ಠಲ ಹೆಗ್ಗಡೆ. ಪು 63.



10. "1799ರಲ್ಲಿ ಅಸೋಫರಲ್ಲಿ (ಪ್ರಾಂತಾಧಿಕಾರಿ) ಒಬ್ಬನೂ ಹಿಂದೂವಿರಲಲ್ಲ. ಟಿಪ್ಪುವಿನ ಕಂದಾಯ ನಿಯಮಗಳಂತೆ ಮುಸಲ್ಮಾನರು ಮನೆ ತೆರಿಗೆ ಕೊಡಬೇಕಾಗಿರಲಿಲ್ಲ. ಇಸ್ಲಾಂಗೆ ಮತಾಂತರ ಹೊಂದಿದವರಿಗೆ ಕಂದಾಯ ಮಾಫಿ ಮಾಡಲಾಗುತ್ತಿತ್ತು. ಟಿಪ್ಪುವಿನ ಪರ್ಷಿಯನ್ ಪ್ರೇಮ ಎಷ್ಟಿತ್ತೆಂದರೆ ಅನೇಕ ಪರಂಪರಾಗತ ಊರ ಹೆಸರುಗಳನ್ನು ಮನ ಬಂದಂತೆ ಬದಲಿಸಿದ, ಮೈಸೂರು ನಜರ್‌ಬಾದ್ ಆಯಿತು. ಉದಾ: 'ಮಾಗಡಿ': 'ಸಾವನಗಡ', 'ನಂದಿ ದುರ್ಗ', 'ಗರ್ದನತುಕೋ', 'ದಿಂಡಿಗಲ್' 'ಖಲೀಕ್ ಬಾದ್': 'ಕಲ್ಲಿಕೋಟೆ' 'ಇಸ್ಲಾಮಾಬಾದ್': 'ಗುತ್ತಿ', 'ಫಯಜ್ ಹಿಸ್ಸಾರ್': 'ಚಿತ್ರದುರ್ಗ': 'ಫಿರ್ರೊ ಕೋಯಬ್ ಹಿಸ್ಸಾರ್', 'ಪಾವಗಡ': 'ಕರೀಮ್ ಗಡ', 'ದೇವನಹಳ್ಳಿ': 'ಯೂಸುಫಾ ಬಾದ್', ಮಡಿಕೇರಿ: 'ಜಫರಾಬಾದ್', ನರಸಿಂಗ ಅಂಗಡಿ: 'ಜಮಾಲಾ ಬಾಗ್'. ಶ್ರೀರಂಗಪಟ್ಟಣದಲ್ಲಿ ಒಂದು ದೇವಾಲಯ ಕೆಡವಿ ಅಲ್ಲಿ ಮಸೀದಿ ಕಟ್ಟಿಸಿದನೆಂದು ಕಿರ್ಮಾನಿಯೂ ಹೇಳಿದ್ದಾನೆ. ಮೇಲುಕೋಟೆ, ನಂಜನಗೂಡು ಮುಂತಾದ ದೇವಾಲಯಗಳು ಬಿಟ್ಟರೆ ಉಳಿದ ದೇವಾಲಯಗಳ ಆದಾಯ ಸೆಳೆದುಕೊಂಡ. ಶ್ರವಣಬೆಳಗೊಳದ ಎಲ್ಲಾ ಆದಾಯ ಕಸಿದುಕೊಂಡ (ಅಲ್ಲಿನ ಪವಿತ್ರ ಗ್ರಂಥಗಳಾದ 'ಧವಳಾ', 'ಜಯಧವಳಾ', ಇತ್ಯಾದಿ ಮೂಡಬಿದರೆಗೆ ಪಲಾಯನವಾಡಿ ಉಳಿದುಕೊಂಡವು). ಶ್ರೀರಂಗಪಟ್ಟಣದ ಬಹುಮಹಡಿ ಅರಮನೆಯಲ್ಲಿದ್ದ ಗ್ರಂಥಗಳನ್ನು, ಓಲೆಗೆರಿ ಕಡತಗಳನ್ನು ಕುದುರೆ ಲಾಯಕ್ಕೆ ಕಳುಹಿಸ ಹೇಳಿ, ಅಲ್ಲಿ ಅವುಗಳನ್ನು ಹುರಳಿ (ಕುಲ್ತಿ) ಬೇಯಿಸಲು ಬಳಸುವಂತೆ ಆಜ್ಞಾಪಿಸಿದನು. ಶತಮಾನಗಳ ಗ್ರಂಥ ಸಂಗ್ರಹ ನಾಶವಾಯಿತು. ಇದು ಕನ್ನಡ ಪ್ರೇಮದಿಂದಾಯಿತೇ?... ಟಿಪ್ಪು ಇತಿಹಾಸದಲ್ಲಿ ಗಣ್ಯ ವಿಚಾರವಂತ, ಸಾಹಸಿ, ಆಡಳಿತದಲ್ಲಿ ಅನೇಕ ಸುಧಾರಣೆಗಳನ್ನು ತಂದ ರಾಜ. ರೇಷ್ಮೆ ಕೃಷಿ, ಸಕ್ಕರೆ ಉದ್ಯಮ, ಕಾಗದದ ಉದ್ಯಮ ಸುಧಾರಿಸಿದವನು. 'ರಾಕೆಟ್' ಆವಿಷ್ಕಾರ ಮಾಡಿದವನು. ಆದರೆ ಅವನಲ್ಲಿ ಇಲ್ಲದ ಸದ್ಗುಣಗಳನ್ನು ಅವನ ಮೇಲೆ ಅರೋಪಿಸಬೇಕೆ?"

–ಡಾ. ಸೂರ್ಯನಾಥ ಕಾಮತ್. ಪು 73–4

11. "ಭಾರತ ಭಾಗ್ಯವಿಧಾತ ಹೈದರಲಿ ಸುತ ಟಿಪ್ಪುಸುಲ್ತಾನ"

– ಅರ್ಜುನ ಕೋರಟಕರ. ಪು 77.

12. "ಇತ್ತೀಚೆಗಷ್ಟೆ ಉನ್ನತ ಶಿಕ್ಷಣ ಸಚಿವ ಶಂಕರಮೂರ್ತಿ ಟಿಪ್ಪು ವಿರುದ್ಧ ದೇಶದ್ರೋಹ, ಕನ್ನಡ ದ್ರೋಹದ ಕತ್ತಿ ಹಿಡಿದು ಯುದ್ಧಕ್ಕಿಳಿದು ನಾಲ್ಕು ದಿಕ್ಕಿನಿಂದ ಹೊಡೆತ ಅನುಭವಿಸಿ ತೆರೆಯ ಹಿಂದಕ್ಕೆ ಓಡುತ್ತಿರುವಾಗಲೇ, ಶಂಕರಮೂರ್ತಿಯವರನ್ನು ಸಮರ್ಥಿಸಿಕೊಂಡು 'ಕ್ಯಾತ' ಸಂಶೋಧಕ ಚಿದಾನಂದಮೂರ್ತಿಗಳು ರಂಗ ಪ್ರವೇಶಿಸಿದ್ದಾರೆ.

ಟಿಪ್ಪುವಿನ ಕುರಿತಂತೆ ಟೀಕೆ ಮಾಡಿದ್ದಕ್ಕಾಗಿ ಸ್ವತಃ ಬಿಜೆಪಿಯಿಂದಲೇ ಶಂಕರಮೂರ್ತಿ ಛೀ, ಥೂ ಎನ್ನಿಸಿಕೊಳ್ಳುತ್ತಿದ್ದಾರೆ. ಈ ಸಂಶೋಧಕ ಚೀಮೂ ಟಿಪ್ಪುವಿನ ಕುರಿತಂತೆ ಶಂಕರಮೂರ್ತಿ ತಳೆದಿರುವ ನಿಲುವು ಸರಿ ಎಂದಿದ್ದಾರೆ ಮಾತ್ರವಲ್ಲದೇ ಆ ಕುರಿತು ಎಲ್ಲಾ ಪತ್ರಿಕೆಗಳಿಗೆ ಒಂದು ಪ್ರಕಟಣೆಯನ್ನು ಬಿಡುಗಡೆ ಮಾಡಿದ್ದಾರೆ. ಟಿಪ್ಪು ಕುರಿತಂತೆ ಚೀಮೂ ಹೇಳಿಕೆ ಇದೇ ಮೊದಲಲ್ಲ. ಸದ್ಯಕ್ಕೆ ಕನ್ನಡ ಸಾಹಿತ್ಯ ಸಂಸ್ಕೃತಿಯ ಸಂಶೋಧನೆಯಿಂದ ನಿವೃತ್ತರಾಗಿರುವ ಚೀಮೂ ಪೂರ್ಣಾವಧಿಯಲ್ಲಿ ಸಂಘ ಪರಿವಾರದ ಸಂಶೋಧಕರಾಗಿ ಕೆಲಸಮಾಡುತ್ತಿರುವುದು ಎಲ್ಲರಿಗೂ ಗೊತ್ತಿದೆ. ಅವರೀಗ ಟಿಪ್ಪು ಕುರಿತಂತೆ ಸಂಘ ಪರಿವಾರಕ್ಕೆ ಬೇಕಾದ ಎಲ್ಲಾ ದಾಖಲೆಗಳನ್ನು ತಯಾರಿಸಿಕೊಂಡು ಜನರ ಮುಂದಿಟ್ಟಿದ್ದಾರೆ".

–ವಾರ್ತಾಭಾರತಿ. ಪು. 95.

13. "ಮೊತ್ತ ಮೊದಲಿಗೆ ಎಲ್ಲರಿಗೂ ಮೇಲ್ನೋಟಕ್ಕೆ ತಿಳಿಯುವಂಥ ಸಂಗತಿ ಏನೆಂದರೆ ದೇಶದಲ್ಲಿ ಯಾವುದೇ ರಾಷ್ಟ್ರಮಟ್ಟದ ಅಸ್ಮಿತಾಭಾವದ ಪ್ರಸ್ತಾಪ ಬಂದೊಡನೆಯೇ ಅದನ್ನು ಮತೀಯ, ಸಂಕುಚಿತ, ಅಸಹಿಷ್ಣು, ಅನೈತಿಹಾಸಿಕ, ಹಿಂದುತ್ವದ ಪೂರ್ವಗ್ರಹ ಎಂದು ಆಕ್ಷೇಪಿಸಿ ಮುಕ್ತ ಮನಸ್ಸು ನೀಡಿ ಎಲ್ಲವನ್ನೂ ಕಾಣಬೇಕೆಂದು ಆಗ್ರಹಿಸಿ ತಮಗಿರುವ ಮಾಧ್ಯಮ ಹಾಗೂ ಸರಕಾರಿ ವಲಯಗಳ ಪ್ರಭಾವದಿಂದ ದೇಶಾದ್ಯಂತ ಆಂದೋಲನ ನಡೆಸುವುದು ಕೆಲವೊಂದು ಪ್ರತಿಷ್ಠಿತರ ಪರಿಯೇ ಆಗಿದೆ".

– ಶತಾವಧಾನಿ ಡಾ. ಆರ್. ಗಣೇಶ್. ಪು 110.

14. "ಟಿಪ್ಪು ಸುಲ್ತಾನನು ಕೊಡಗಿನಲ್ಲಿ ಎಸಗಿದ ದೌರ್ಜನ್ಯಗಳಿಗೆ ಸಮನಾದದ್ದು ಇದುವರೆಗೂ ಬೇರೆಲ್ಲೂ ಕೇಳಿಯೇ ಇಲ್ಲ.... ಮಲಬಾರಿನಲ್ಲಿ ಟಿಪ್ಪು ಸುಲ್ತಾನನ ದೌರ್ಜನ್ಯದ ಮುಖ್ಯ ಗುರಿ ಅಲ್ಲಿನ ಹಿಂದೂಗಳು ಮತ್ತು ಅವರ ದೇಗುಲಗಳು. ತಲಚೇರಿಯ ತಿರುವೆಂಗಾಡು (ಹಿತ್ತಳೆ ಪಗೋಡ ಎಂದೇ ಪ್ರಸಿದ್ಧ) ದೇಗುಲ ಮತ್ತು ಬಡಕಾರಾ ಸಮೀಪದ ಪೊನ್ನೇರಿ ದೇಗುಲ ಇವುಗಳೆಲ್ಲವೂ ಟಿಪ್ಪು ಸುಲ್ತಾನನಿಂದ ನಾಶಗೊಂಡುವಂತೆ. ಮಣಿಯಾರ್ ಮಸೀದಿಯೆಂಬುದು ಹಿಂದೆ ಹಿಂದೂ ದೇಗುಲವಾಗಿತ್ತೆಂದು ಹೇಳುತ್ತಾರೆ".

–ಎಂ. ಆರ್. ನರಸಿಂಹನ್. ಪು. 141.

15. "ಹೈದರನು ಮಲಬಾರಿನಲ್ಲಿ ವಿಶೇಷ ಹಾವಳಿ ಮಾಡಿದನು. ಅದನ್ನು ಬಾರ್ಥಾಲೊಮ್ಯು ಎಂಬಾತ ಬಹಳ ಭಯಂಕರವಾಗಿ ತನ್ನ Voyage to East ಎಂಬ ಪುಸ್ತಕದಲ್ಲಿ ವಿವರಿಸಿದ್ದಾನೆ. "The inhabitants fled their houses. Their houses were set aflame. Their fruit trees were cut down, their cattle were destroyed. Most of their temples were burnt. The Hindus were



hanged. Their wives and children were sold to slavery". ಕೆ.ಎಂ. ಪಣಿಕ್ಕರ್ ಅವರು Freedom Struggle. ಎಂಬ ಪುಸ್ತಕದಲ್ಲಿ ತಿಳಿಸುವುದೇನೆಂದರೆ, ಟಿಪ್ಪು ಹಿಂದೆ ಸರಿಯುವುದಾದರೆ ಹಣ ನೀಡುವೆನೆಂದ ಚಿರಕ್ಕಲ್ ರಾಜರಿಗೆ 'ಇಡೀ ಜಗತ್ತನ್ನೇ' ನನಗೆ ಉಡುಗೊರೆಯಾಗಿ ನೀಡಿದರೂ ನಾನು ಹಿಂದೂ ದೇವಸ್ಥಾನಗಳನ್ನು ಧ್ವಂಸ ಮಾಡದಿರಲಾರೆ ಎಂದ. ಜಿ. ಆರ್. ಜೋಷ್ಯೆರ್ ತಮ್ಮ History of Mysore and Yadava Dynasty ನಲ್ಲಿ ಹೀಗೆ ಬರೆಯುತ್ತಾರೆ: "The following state paper in Tippu's hand writing - "There are 500 Coorg prisoners who must be dealt with in such a manner as shall endure their death in the course of twenty days. Such of their women as are young must be given to Musalmans and the rest together with their children, kept in prison on a small allowance."

– ಎಂ.ಆರ್. ನರಸಿಂಹನ್. ಪು 154–58

16. "ಜಾತ್ಯತೀತ ನೀತಿ, ಆತನ ಮತ್ತೊಂದು ವಿಶಿಷ್ಟ ಗುಣ. "ಟಿಪ್ಪು ಹಿಂದೂ–ಮುಸ್ಲಿಂ ಮೈತ್ರಿಯ ಪ್ರತಿರೂಪ" ಎಂದು ಗಾಂಧೀಜಿ ಯಂಗ್ ಇಂಡಿಯಾ ಪತ್ರಿಕೆಯಲ್ಲಿ ಬರೆದರು. ಶೃಂಗೇರಿ ಮಠಕ್ಕೆ ಟಿಪ್ಪು ಬರೆದ ಪತ್ರಗಳಲ್ಲಿ ಆತ ಹಿಂದೂ ಧಾರ್ಮಿಕ ಸಂಸ್ಥೆಗಳ ಬಗ್ಗೆ ತಾಳಿದ್ದ ಗೌರವ ಭಾವವನ್ನು ಎತ್ತಿ ಹಿಡಿಯುತ್ತದೆ. ಚಿಂತನೆ ಮತ್ತು ಕ್ರಿಯೆಯಲ್ಲಿ ಟಿಪ್ಪು ಕ್ರಾಂತಿಕಾರಿಯಾಗಿದ್ದ. ಆತನ ವಿರೋಧಿಗಳೂ ಆತನಿಗಿದ್ದ ದಾರ್ಶನಿಕ ಗುಣಗಳನ್ನು ಕೊಂಡಾಡಿದ್ದಾರೆ".

– ಪ್ರೋ. ಬಿ. ಶೇಖ್ ಆಲಿ. ಪು. 193–194

17. "ನವಾಬ್ ಹೈದರ್ ಆಲಿಯು ಹೇಗೆ ಪರಮತ ಸಹಿಷ್ಣುವಾಗಿದ್ದರೋ ಅದೇ ರೀತಿಯಾಗಿ ಟಿಪ್ಪು ಸುಲ್ತಾನರ ಹೃದಯದಲ್ಲಿಯೂ ಪ್ರತಿಯೊಂದು ಧರ್ಮ ಮತ್ತು ಜನಾಂಗಕ್ಕೆ ಗೌರವವಿದ್ದಿತು. ಇದಕ್ಕೆ ದ್ಯೋತಕವಾಗಿ ಕರ್ನಾಟಕ ರಾಜ್ಯದ ಎಲ್ಲಾ ದೇವಾಲಯಗಳು ಮೂಕಸಾಕ್ಷಿಯಾಗಿ ನಿಂತಿವೆ".

– ಮಹಮ್ಮದ್ ಶೇಖ್ ಆಲಿ. ಪು 195

18. "ಟಿಪ್ಪು ಸುಲ್ತಾನ ಕನ್ನಡ ಪ್ರೇಮಿ, ದೇಶ ಪ್ರೇಮಿ ಅಲ್ಲ – ಮತಾಂಧ, ಉಗ್ರಗಾಮಿ ಆಗಿದ್ದ".

– ವ್ಹಿ. ಸಿ. ಮಾಲಗತ್ತಿ ಪು. 208

19. "Tippu's idea of political power was not based merely on military might or the territorial expanse but it was ably supported by a serious endeavour to provide for overall economic prosperity and political consolidation. He was a remarkable personality in the history of Karnataka in particular and India in general".

- Shivasundar. P-234

ಈ ವಿಷಯದಲ್ಲಿ ಮುತ್ತಣ್ಣ, ಶರ್ಮ ನೀಡಿರುವ ಅಭಿಪ್ರಾಯಗಳ ಸಾರಾಂಶವನ್ನು ಮುಂದೆ ಒಂದು ಅಧ್ಯಾಯದಲ್ಲಿ ನೀಡಲಾಗಿದೆ. ಅಲ್ಲಿ ಮೇಲ್ಕಂಡ ಅಭಿಪ್ರಾಯಗಳ ಸಾರಾ ಸಗಟಿನ ವಿಮರ್ಶೆ ಮೂಡಿ ಬರುತ್ತದೆ. ಮೂಲ ಆಕರಗಳನ್ನು ಒಮ್ಮೆ ಸಮೀಕ್ಷಿಸಿದರೆ ಸಾಕು – ಅತಿ ಸೂಕ್ಷ್ಮವಾಗಿ ಗೋಚರವಾಗುತ್ತದೆ. (1) ಟಿಪ್ಪು ವೀರ ಹೌದು, ಆದರೆ ಸ್ವಾತಂತ್ರ್ಯ ಹೋರಾಟಗಾರ ಅಲ್ಲ (2) ಅಪ್ಪಟ ಮತಾಂಧ, ಕ್ರೂರಿ (3) ಕರ್ನಾಟಕದ ಚರಿತ್ರೆಯಲ್ಲಿ ಆ ದೃಷ್ಟಿಯಿಂದ ಅವನನ್ನು ಹೋಲುವ ವ್ಯಕ್ತಿ ಅವನೇ; (4) ಬ್ರಿಟಿಷರು ಅವನನ್ನು ಸೋಲಿಸದಿದ್ದರೆ ಇಡೀ ದಕ್ಷಿಣ ಭಾರತ ಇಸ್ಲಾಮೀಕರಣವಾಗುತ್ತಿತ್ತು; ಅಖಂಡ ಭಾರತ ದೇಶದ ಪರಿಕಲ್ಪನೆ ಮೂಡಿ ಬರುತ್ತಿರಲಿಲ್ಲ.

❀❀❀❀



# 3. ಟಿಪ್ಪು ಬಗ್ಗೆ ಮೌಖಿಕ ಮಾಹಿತಿ.

ಡಾ ಆರ್. ಗೋಪಾಲ್ ಸಂಪಾದಿತ "ದಿವಾನ್ ಪೂರ್ಣಯ್ಯ" ಕೃತಿಯಲ್ಲಿ (2008) ಕೆ. ಸದಾಶಿವ ಅವರು ಬರೆದಿರುವ "ಮೌಖಿಕ ಆಧಾರಗಳಲ್ಲಿ ಪ್ರತಿಬಿಂಬಿತವಾದಂತೆ ಪೂರ್ಣಯ್ಯನವರು" ಎಂಬ ಲೇಖನವು ಪ್ರಕಟವಾಗಿದ್ದು, ಅದರಲ್ಲಿ ಟಿಪ್ಪು ಬಗ್ಗೆ ಇರುವ ತಲೆಮಾರಿನಿಂದ ತಲೆಮಾರಿಗೆ ಹರಿದಿರುವ ಕೆಲವು ಅಂಶಗಳನ್ನು ಪ್ರಸ್ತಾಪಿಸಿದ್ದಾರೆ. ಆ ವದಂತಿ ಪ್ರಕಾರ ಟಿಪ್ಪು ಅವನ ಮಂತ್ರಿ ಪೂರ್ಣಯ್ಯ ಇವರ ಸಂಬಂಧ ಕೆಡಲು ಕಾರಣ ಅವನು ಪೂರ್ಣಯ್ಯನನ್ನು ಮತಾಂತರಗೊಳಿಸಲು ಯತ್ನಿಸಿದ್ದು. ಟಿಪ್ಪು ಮಡಿದ ಮಾರನೆಯ ವರ್ಷ (ಜೂನ್ 1800) ಮೈಸೂರಿಗೆ ಭೇಟಿ ನೀಡಿದ್ದ ಪ್ರವಾಸಿ ಬುಕನನ್ ಜನರ ಬಾಯಿಂದ ಕೇಳಿದ ಸಂಗತಿಯನ್ನು ದಾಖಲಿಸಿದ್ದಾನೆ. ಒಮ್ಮೆ ಮತಾಂಧ ಟಿಪ್ಪುವು ಪೂರ್ಣಯ್ಯನವರಿಗೆ "ನೀನು ಇಸ್ಲಾಂಗೆ ಪರಿವರ್ತನೆ ಆಗು" ಎಂದು ಹೇಳಿದ. ಸುಲ್ತಾನನ ಮಾತು ಆಜ್ಞೆ, ಅದನ್ನು ಅವರು ಒಪ್ಪಲೇಬೇಕಿತ್ತು. ಅವರು "ನಾನು ನಿಮ್ಮ ಸೇವಕ" ಎಂದು ಉತ್ತರಿಸಿ ಬ್ರಾಹ್ಮಣ ಪೂರ್ಣಯ್ಯ ಹೊರಟುಬಿಟ್ಟರು. ಪೂರ್ಣಯ್ಯನವರ ಆಡಳಿತ ಶಕ್ತಿ ತಿಳಿದಿದ್ದ ಟಿಪ್ಪು ತಾಯಿ ಅಲ್ಲೇ ಇದ್ದ ತೆರೆಯ ಹಿಂದಕ್ಕೆ ಮಗನನ್ನು ಕರೆಯಿಸಿ ಅಂತಹ ಆಘಾತಕಾರಿ ಯೋಚನೆ ಸರಿ ಅಲ್ಲ ಎಂದು ತಿಳಿಸಿದಳು. ಟಿಪ್ಪು ತನ್ನ ಆಲೋಚನೆಯನ್ನು ಕೈ ಬಿಟ್ಟ. ಇದನ್ನು ಇತಿಹಾಸಕಾರರಾದ ರೈಸ್, ಹಯವದನರಾವ್ ದಾಖಲಿಸಿದ್ದಾರೆ. ಆ ಘಟನೆ ಶ್ರೀರಂಗಪಟ್ಟಣದ ಹಿರಿಯ ಜನರ ಮನಸ್ಸಿನಲ್ಲಿ ಉಳಿದಿದೆ.

ಆ ಘಟನೆಯ ಬಗ್ಗೆ ಒಂದು ಲಾವಣಿಯೂ ಇದೆ. ಪೂರ್ಣಯ್ಯನವರ ಮಗಳು ಕಾವೇರಿಯನ್ನು ಅವಳು ಕಾವೇರಿ ನದಿಯಲ್ಲಿ ಸ್ನಾನ ಮಾಡುತ್ತಿರುವಾಗ ಟಿಪ್ಪು ಖಿಲ್ಲೇದಾರ್ ಖಾದಿರ್‌ಖಾನ್ ನದಿ ದಂಡೆಯಲ್ಲಿ ಮಾನಭಂಗ ಮಾಡಿದ. ಟಿಪ್ಪು ಆ ಅಪರಾಧಿಯನ್ನು ಶಿಕ್ಷಿಸುವ ಬದಲು "ನಾಯಿ ತಿಂದ ಎಂಜಲಿನ ಮಡಕೆಯನ್ನು ನಾಯಿ ಕೊರಳಿಗೆ ಕಟ್ಟಿ" ಎಂದ (ಆ ಹುಡುಗಿಯನ್ನು ಖಾದಿರ್ ಖಾನ್‌ಗೆ ಒಪ್ಪಿಸಿ ಎಂದು ಹೇಳಿದ). ಇಂತಹ ಘಟನೆಗಳು ನಡೆದುದರಿಂದ ಪೂರ್ಣಯ್ಯ ಬ್ರಿಟಿಷರ ಜೊತೆ ಶಾಮೀಲಾಗಿ ಟಿಪ್ಪುವನ್ನು ಸೋಲಿಸಿದ. ಮೇಲಿನ ಘಟನೆ ನಡೆದದ್ದು "ಮೋಹಿನಿ ದಿಬ್ಬ" ಎಂಬ ಜಾಗದಲ್ಲಿ ಎಂದು ಜನ ನಂಬಿದ್ದಾರೆ.

ಇನ್ನೊಂದು ಜಾನಪದ ಹೇಳಿಕೆಯ ಪ್ರಕಾರ, ಟಿಪ್ಪುವಿನ ಮುಸ್ಲಿಂ ಸೈನಿಕರು ಶ್ರೀ ವೈಷ್ಣವ ಬ್ರಾಹ್ಮಣರ ಹಣೆಯ ನಾಮವನ್ನು ನೆಕ್ಕಿ ಅವರನ್ನು ಜಾತಿ ಭ್ರಷ್ಟರನ್ನಾಗಿ ಮಾಡುತ್ತಿದ್ದರು. ಆ ಸೈನಿಕರ ವಿರುದ್ಧ ಟಿಪ್ಪು ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ. ಪೂರ್ಣಯ್ಯನವರಿಗೆ ಶ್ರೀರಂಗಪಟ್ಟಣದ

‘ಪಟ್ಟಣಗೌಡ’ ಎಂಬಾತನು ದೂರು ಕೊಟ್ಟಾಗ ಪೂರ್ಣಯ್ಯನವರು ಟಿಪ್ಪುವಿನ ಕೈಯಲ್ಲೇ ನಾಮ ನೆಕ್ಕಿಸಿದರು – ಟಿಪ್ಪು ನಾಮ ನೆಕ್ಕಿದ ಫಲವಾಗಿ ಅವನ ಸೈನಿಕರು ಸತ್ತೇ ಹೋದರು.

ಲಾವಣಿಯೊಂದರ ಒಂದು ಭಾಗ ಹೀಗಿದೆ;
“ಉತ್ತಮ ಜನರಿಗೆ ಚಿತ್ತ ಚಂಚಲವು
ಜಾತಿ ಚಿಂತೆ ಬಹು ಆಗಿತ್ತು
ಅಜಯ್ ತಮಾಷ ಈಸ್ಟ್ ಇಂಡಿಯ ಕಂಪನಿ
ಇಂಗ್ಲೀಷರ ನೆಲೆ ಆದೀತು
ಸುತ್ತ ಕಾವೇರಿ ನಡುವೆ ಶ್ರೀರಂಗಪಟ್ಟಣ
ಸುಲ್ತಾನ್ ದವಲತ್ತು ಹೋಯಿತ್ತು”.

ಟಿಪ್ಪುವಿನ ಕಾಲದಲ್ಲಿ ಜನರಿಗೆ ತಮ್ಮ ಜಾತಿಯ ಚಿಂತೆ ಬಹಳ ಆಗಿತ್ತು. ತಮ್ಮನ್ನು ಜಾತಿ ಭ್ರಷ್ಟರನ್ನಾಗಿ ಮಾಡಿ ಮುಸ್ಲಿಂ ಆಗಿ ಪರಿವರ್ತಿಸುವ ಭಯ ಆಗಿತ್ತು. ತಮಾಷೆ ಸಂಗತಿ ಎಂದರೆ (ಸಂತೋಷದ ಸಂಗತಿ ಎಂದರೆ) ಕಾವೇರಿ ಸುತ್ತುವರಿದಿದ್ದ ಶ್ರೀರಂಗಪಟ್ಟಣವು ಈಸ್ಟ್ ಇಂಡಿಯಾ ಕಂಪನಿ ವಶವಾಗಿತ್ತು. ಸುಲ್ತಾನನ ದವಲತ್ತು ಅಧಿಕಾರ ವರ್ಷ ನಾಶವಾಯ್ತು. ಇಂಗ್ಲಿಷರು ತಮ್ಮ ಜಾತಿ ಉಳಿಸಿ ಕಾಪಾಡಿದರು ಎಂಬುದೇ ಲಾವಣಿಕಾರನ ಸ್ಪಷ್ಟ ಅಭಿಮತ.

ರೈಸ್, ಹಯವದನರಾವ್ ದಾಖಲಿಸಿರುವಂತೆ, ಟಿಪ್ಪು ಸಾವಿನ ಬಳಿಕ ಇಂಗ್ಲಿಷರು ಶರಣಾಗತನಾಗಲು ಸೂಚನೆ ನೀಡಿದಾಗ ಪೂರ್ಣಯ್ಯನವರು ಹೇಳಿದ್ದು – “How can I hesitate to surrender to a nation who are the protectors of my tribe (=ಹಿಂದೂ) from Kashi to Rameshvaram”

ದಿವಾನ್ ಪೂರ್ಣಯ್ಯನವರು ತಮಿಳುನಾಡಲ್ಲಿ ಜನಿಸಿದ ಮರಾಠಿ ಮನೆ ಮಾತಿನ ಮಾಧ್ವ ಬ್ರಾಹ್ಮಣ. ಟಿಪ್ಪು ಸಾವಿನ ಬಳಿಕ ಅವನು ಧ್ವಂಸಮಾಡಿದ್ದ ಮೈಸೂರು ಅರಮನೆಯನ್ನು ಅದೇ ಶೈಲಿಯಲ್ಲಿ ಪೂರ್ಣಯ್ಯನವರು ಕಟ್ಟಿಸಿದರು.

* * * *

# 4. ಪತ್ರಗಳಲ್ಲಿ ಮೂಡಿರುವ ಟಿಪ್ಪುವಿನ ನಿಜ ಚಿತ್ರ

ಟಿಪ್ಪು ಸುಲ್ತಾನನನ್ನು ಕುರಿತಂತೆ ಎಚ್.ಡಿ. ಶರ್ಮ ಬರೆದ The Real Tipu ಎಂಬ ಕೃತಿಯ ಕನ್ನಡ ಅನುವಾದದ (ಅನು: ಡಾ. ಪ್ರಧಾನ್ ಗುರುದತ್) ಸಾರಾಂಶ ರೂಪದ ನನ್ನ ಒಂದು ಲೇಖನವು ಹಿಂದೆ ಪ್ರಮುಖ ಕನ್ನಡ ದಿನಪತ್ರಿಕೆಯಲ್ಲಿ (18–5–2003) ಪ್ರಕಟವಾಗಿದೆ.

ಶರ್ಮಾ ತಮ್ಮ ಕೃತಿಯಲ್ಲಿ ಟಿಪ್ಪು ಸುಲ್ತಾನನೇ ಬರೆದ ಕೆಲವು ಪತ್ರಗಳ (ಇವು ಲಂಡನ್ನಿನಲ್ಲಿವೆ) ಮಲಯಾಳಂ ಅನುವಾದವನ್ನು ಡಾ. ಕೆ. ಎಂ. ಪಣಿಕ್ಕರ ಅವರು 1923ರಲ್ಲಿ “ಭಾಷಾ ಪೋಷಿಣಿ” ಎಂಬ ಪತ್ರಿಕೆಯಲ್ಲಿ (ಆಗಸ್ಟ್ 1923), ಪ್ರಕಟಿಸಿರುವುದನ್ನು – ಹಾಗೂ ಇತರೆಡೆ ಪ್ರಕಟವಾಗಿರುವ ಅವನ ಪತ್ರಗಳು ಹಾಗೂ ಆದೇಶಗಳನ್ನು ಬಳಸಿಕೊಂಡಿದ್ದಾರೆ. ನಾನು ಮೇಲೆ ಹೇಳಿರುವ ನನ್ನ ಸಾರಾಂಶ ರೂಪದ ಲೇಖನದಲ್ಲಿ ಸ್ಪಷ್ಟಪಡಿಸಿರುವಂತೆ ನನ್ನ ಮುಖ್ಯ ಉದ್ದೇಶ ಶರ್ಮಾರ ಅಭಿಪ್ರಾಯಗಳನ್ನು ನೀಡುವುದೇ ಹೊರತು, ಎಲ್ಲೂ ನನ್ನ ಅಭಿಪ್ರಾಯಗಳನ್ನು ಅವುಗಳ ಜೊತೆ ಮಿಶ್ರಣಮಾಡಿಲ್ಲ. ಲೇಖನದ ಕೊನೆಯಲ್ಲಿ ಮಾತ್ರ ಪ್ರತ್ಯೇಕವಾಗಿ ಹೇಳಬೇಕಾದ ಕೆಲವು ಮಾತುಗಳನ್ನು ಹೇಳಿದ್ದೇನೆ. ಶರ್ಮಾ ಅವರು ಟಿಪ್ಪು, ಸ್ವಭಾವದ ಬಗ್ಗೆ ತಾಳಿರುವ ನಿಲುವು ವಸ್ತುನಿಷ್ಠವಾದುದಾಗಿದೆ ಎಂಬ ನನ್ನ ಖಚಿತ ಅಭಿಪ್ರಾಯವನ್ನೂ ಅಲ್ಲಿ ವ್ಯಕ್ತಪಡಿಸಿದ್ದೇನೆ. ಇದಕ್ಕೆ ಕಾರಣ ಸ್ಪಷ್ಟವಾಗಿದೆ. ಒಬ್ಬ ವ್ಯಕ್ತಿ ದಾನದತ್ತಿಗಳನ್ನು ನೀಡಿರಬಹುದು. ತಾನು ಉದಾರ ಮನೋಧರ್ಮದವನೆಂಬುದನ್ನು ಆ ಮೂಲಕ ತೋರಿರಬಹುದು. ಅಷ್ಟರಿಂದಲೇ ಒಬ್ಬ ವ್ಯಕ್ತಿಯ ನಿಜ ಸ್ವಭಾವವೇನೆಂಬುದು ಸ್ಪಷ್ಟವಾಗುವುದಿಲ್ಲ. ಹಾಗೆ ದಾನ ದತ್ತಿಗಳನ್ನು ನೀಡಿರುವಲ್ಲಿ ಪ್ರಾಮಾಣಿಕತೆಯೂ ಇರಬಹುದು, ಅಥವಾ ಹೊರಗೆ ಅಂತಹ ಒಂದು ಚಿತ್ರವನ್ನು ಸಾರ್ವಜನಿಕರಿಗೆ ನೀಡಿ ಒಳಗೆ ಮಾಡುವ ಅನ್ಯಾಯಗಳನ್ನು ಮುಂದುವರಿಸಿರಬಹುದು. ಇದು ಲೋಕದ ಸ್ವಭಾವ. ಟಿಪ್ಪು ಮೈಸೂರು ಪ್ರದೇಶದ ಮೇಲ್ಕೋಟೆ, ಶೃಂಗೇರಿ ಹಿಂದೂ ಧಾರ್ಮಿಕ ಸಂಸ್ಥೆಗಳಿಗೆ ಸಹಾಯ ಮಾಡಿದ್ದಾನೆ. ಆದರೆ ಅವನೇ ಸ್ವತಃ ತನ್ನ ಕೈಯಾರೆ ಕೇರಳದ ಮಲಬಾರ್ ಪ್ರದೇಶದ ತನ್ನ ಅಧಿಕಾರಿಗಳಿಗೆ ಒಳಗಿಂದೊಳಗೆ ಪತ್ರಗಳನ್ನು ಬರೆದು ಆದೇಶ ನೀಡಿರುವುದು ಅವನ ನಿಜ ಸ್ವಭಾವವನ್ನು ತಿಳಿಸುತ್ತದೆ.

ಮೇಲೆ ಉಲ್ಲೇಖಿಸಿದ ಶ್ರೇಷ್ಠ ಇತಿಹಾಸಕಾರ, ಮೈಸೂರು ವಿಶ್ವವಿದ್ಯಾಲಯದ ಮಾಜಿ ಕುಲಪತಿ, ರಾಜ್ಯ ಪುನರ್ವಿಂಗಡಣಾ ಆಯೋಗದ ಸದಸ್ಯ, ಚೀನಾದಲ್ಲಿ ಭಾರತದ ರಾಯಭಾರಿಯಾಗಿದ್ದ, ಮೈಸೂರು ವಿಶ್ವವಿದ್ಯಾಲಯದ ಮಾಜಿ ಕುಲಪತಿ. (ಆಗ ನಾನು ಮೈಸೂರು ಯುವರಾಜಾ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕ), ಶ್ರೇಷ್ಠ ಇತಿಹಾಸಜ್ಞ ಸರ್ದಾರ್ ಕೆ.

ಎಂ. ಪಣಿಕ್ಕರ್ ಬರೆದ ಮಲಯಾಳಮ್ ಲೇಖನದ ಪ್ರತಿಯನ್ನು ಕಲ್ಲಿಕೋಟೆಯಿಂದ ಬೆಂಗಳೂರು ವಿಶ್ವವಿದ್ಯಾಲಯದ ಗ್ರಂಥಾಲಯ ಸಹಕಾರದಿಂದ ಪಡೆದು ಅದರ ಯಥಾವತ್ತಾದ ಕನ್ನಡ ಅನುವಾದವನ್ನು ಇಲ್ಲಿ ನೀಡುತ್ತಿದ್ದೇನೆ. (ಮಲಯಾಳಂನಿಂದ ಕನ್ನಡಕ್ಕೆ ಅನುವಾದಿಸುವಲ್ಲಿ ಕೆ.ಜಿ.ಪಿ. ಕುಮಾರ್, ಹಾಗೂ ಕೆ. ಆರ್. ಶ್ರೀರೇಖಾ ನೀಡಿರುವ ಸಹಕಾರವನ್ನು ಸ್ಮರಿಸುತ್ತೇನೆ) ಪಣಿಕ್ಕರರ ಇಡಿಯಾದ ಲೇಖನವು ಹೀಗಿದೆ

## ಟಿಪ್ಪು ಸುಲ್ತಾನ ಬರೆದ ಕೆಲವು ಪತ್ರಗಳು (ಕೆ.ಎಂ. ಪಣಿಕ್ಕರ್)

ಕೇರಳವನ್ನು ಆಕ್ರಮಿಸಿ ಜಯ ಸಾಧಿಸುವ ಸಂದರ್ಭದಲ್ಲಿ ಟಿಪ್ಪು ಸುಲ್ತಾನನು ಯಾವುದೇ ರೀತಿಯ ಅಮಾನುಷ ಕೃತಿಗಳನ್ನು ಎಸಗಿಲ್ಲವೆಂದೂ ಅವನ ಉದ್ದೇಶ ಜಯ ಸಂಪಾದಿಸುವುದು ಮಾತ್ರವೇ ಆಗಿತ್ತೆಂದೂ ಜನಾಭಿಪ್ರಾಯವು ಮೂಡಿದೆ.

ಆದರೆ, "ಜಾತಕ ಸಂದೇಶ" ಎಂಬ ಕೃತಿ ಹಾಗೂ ಕೆಲವು ಐತಿಹಾಸಿಕ ದಾಖಲೆಗಳು ಆ ಜನಾಭಿಪ್ರಾಯವು ಸತ್ಯದೂರವಾದುದೆಂಬುದನ್ನು ಸುಲಭವಾಗಿ ಸಾದರಪಡಿಸುತ್ತವೆ.

ಆ ಸಂದರ್ಭದಲ್ಲಿ ನಡೆದ ಘೋರ ಅಮಾನವೀಯ ಕೃತ್ಯಗಳಿಗೆಲ್ಲ ಕೇವಲ ಟಿಪ್ಪುವನ್ನು ಹೊಣೆಗಾರರನ್ನಾಗಿಸುವುದು ಸರಿಯಲ್ಲವೆಂಬುದು ಕಂಡುಬಂದರೂ, ಟಿಪ್ಪು ಸುಲ್ತಾನನೇ ಸ್ವತಃ ಬರೆದ ಪತ್ರಗಳು ಆ ಎಲ್ಲ ಬಗೆಯ ಅನುಮಾನಗಳನ್ನು ನಿವಾರಿಸುತ್ತವೆ.

### ಪತ್ರ 1: ಕಲ್ಲಿಕೋಟೆಯ ಸೇನಾಧಿಪತಿಗೆ ಬರೆದದ್ದು (14-12-1788)

"ಮೀರ್ ಹುಸೇನ್ ಆಲಿಯನ್ನು ಇಬ್ಬರು ಅಂಗರಕ್ಷಕರೊಂದಿಗೆ ಕಳುಹಿಸಲಾಗಿದೆ. ಆತನು ನಿಗದಿತ ಸ್ಥಳವನ್ನು ದೇವರ ಕೃಪೆಯಿಂದ ಸೇರಲಿದ್ದಾನೆ. ನೀನು ಆತನ ಜೊತೆಗೂಡಿ, ದೈವದಲ್ಲಿ ನಂಬಿಕೆಯಿಲ್ಲದ ಎಲ್ಲ ನಾಸ್ತಿಕರನ್ನು ಬಂಧಿಸಿ ಕೊಲ್ಲಬೇಕು. ಇಪ್ಪತ್ತು ವರ್ಷಗಳಿಗಿಂತ ಕಿರಿಯ ತರುಣರನ್ನು ಸೆರೆ ಮನೆಯಲ್ಲಿಟ್ಟು ಉಳಿದಂತೆ ಕನಿಷ್ಠ ಐದು ಸಾವಿರ (5000) ಮಂದಿಯನ್ನು ಮರಗಳಿಗೆ ನೇಣು ಹಾಕಬೇಕು".

ಲೇಖಕರ ಟಿಪ್ಪಣಿ : ಮೇಲೆ ತಿಳಿಸಿದಂತೆ, ಮೀರ್ ಹುಸೇನ್ ಆಲಿಯ ಸೇನೆ ಕೇರಳವನ್ನು ವಶಪಡಿಸಿಕೊಂಡಿತು. ಆ ದಿನಗಳಲ್ಲಿ ಟಿಪ್ಪುವು ಹೇಯ ಕೃತ್ಯಗಳನ್ನು ಎಸಗಿದನೆಂಬುದಕ್ಕೆ ಅನ್ಯ ಸಾಕ್ಷ್ಯಾಧಾರ ಬೇಕಾಗಿಲ್ಲ.

ಪತ್ರ 2: **ಕೊಡಗೇರಿಯ ಸೇನಾಧಿಪತಿ ಮೀರ್ ಹೈದರನಿಗೆ ಟಿಪ್ಪು ಆದೇಶ** (14-12-1978) 'ರಹಸ್ಯ' ಮೂಲಗಳಿಂದ ತಿಳಿದು ಬಂದಿರುವಂತೆ, ಕೊಡಗೇರಿ ಮತ್ತು ಕೊಡತ್ತನಾಟ್ಟು



ರಾಜರು ಒಂದಾಗಿದ್ದಾರೆ. ನೀನು ಕುಟಿಲೋಪಾಯಗಳನ್ನಾದರೂ ಸರಿಯೇ ಬಳಸಿ ಅವರನ್ನು ಬಂಧಿಸಿ ಅವರನ್ನು ನಿರ್ನಾಮ ಮಾಡಿ ಅವರಿಗೆ ನರಕದ ಹಾದಿ ತೋರಬೇಕು. ಆ ಎರಡೂ ನಾಯಿಗಳನ್ನು ಹಿಡಿದ ತಕ್ಷಣ ಮೇಲಿನ ನಮ್ಮ ಆಜ್ಞೆಯಂತೆ ಅವರನ್ನು ಶಿಕ್ಷಿಸಬೇಕು. (ನಿರ್ನಾಮ ಮಾಡಬೇಕು)".

### ಪತ್ರ 3: ಶೇಖ್ ಕುತ್‌ಬುದೀನನಿಗೆ ಪತ್ರ (21-12-1788)

"ನಿನ್ನ ವರದಿಯಿಂದ ಅತೀವ ಹರ್ಷವಾಗಿದೆ. ಸೆರೆಸಿಕ್ಕವರಲ್ಲಿ ಇಪ್ಪತ್ತು ವರ್ಷಗಳಿಗೆ ಮೇಲ್ಪಟ್ಟವರನ್ನೆಲ್ಲ ಮರಗಳಿಗೆ ನೇಣು ಹಾಕಬೇಕು. ಬೆಟ್ಟಗುಡ್ಡ ಕಾಡು ಮೇಡುಗಳಲ್ಲಿ ಅಡಗಿದ್ದರೆ ಅವರನ್ನು ಹಿಡಿದು ಶಿಕ್ಷಿಸಬೇಕು. ಈ ಕಾರ್ಯವನ್ನು ಸಮರ್ಥವಾಗಿ ನಿರ್ವಹಿಸಲು ದಿಲೀರ್ ಮತ್ತು ಧೀಲ್ ಖಾನರ ನೇತೃತ್ವದಲ್ಲಿ ಸೇನೆಯನ್ನು ಎರಡು ಭಾಗಗಳನ್ನಾಗಿ ಮಾಡಲು ಅವರ ಜೊತೆ ಒಪ್ಪಂದ ಮಾಡಿಕೊಳ್ಳಬಹುದು".

### ಪತ್ರ 4:

"ಬಂಧಿತರಾಗಿರುವ 242 ನಾಯರುಗಳನ್ನು ಕಳುಹಿಸಿಕೊಟ್ಟಿದ್ದೇವೆ. ಅವರ ಸ್ಥಾನಮಾನಗಳ ವಿವರವಾದ ಪಟ್ಟಿ ಕೂಡ ಕಳುಹಿಸಲಾಗಿದೆ. ಅವರೆಲ್ಲರನ್ನೂ ಇಸ್ಲಾಮಿಗೆ ಮತಾಂತರಿಸಿ ಬಳಿಕ ಪುರುಷರಿಗೆ ಆರು ಅಡಿ ಉದ್ದದ ಬಟ್ಟೆ ಹಾಗೂ ರುಮಾಲುಗಳನ್ನು, ಸ್ತ್ರೀಯರಿಗೆ ಎಂಟು ಅಡಿ ಉದ್ದದ ಬಟ್ಟೆ ಮತ್ತು ರವಿಕೆಗಳನ್ನು ಒದಗಿಸುವುದು. ಅವರೆಲ್ಲರ ಮೇಲೆ ತೀವ್ರ ನಿಗಾ ಇರಲಿ. ಮೇಲಿನ ನನ್ನ ಆಜ್ಞೆಗಳ ಉಲ್ಲಂಘನೆಯಾದಲ್ಲಿ, ಬಂಧನದಿಂದ ಯಾರಾದರೂ ತಪ್ಪಿಸಿಕೊಂಡಲ್ಲಿ ನನ್ನ ತೀವ್ರ ಆಕ್ರೋಶಕ್ಕೆ ನೀನು ಗುರಿಯಾಗುತ್ತೀಯ".

### ಪತ್ರ 5: 1789ರ ಟಿಪ್ಪು ಘೋಷಣೆ:

"ನೀನು ಇಪ್ಪತ್ತೈದು ವರ್ಷಗಳಲ್ಲಿ ಒಂದು ಲಕ್ಷಕ್ಕೂ ಮೀರಿದ ಸೈನಿಕರನ್ನು ಕೊಂದಿರುವೆ. ಅಂತಹ ನೀನು (ಈಗ) ಸರ್ಕಾರಿ ವಿರೋಧಿ ಕೃತ್ಯಗಳಲ್ಲಿ ತೊಡಗಿರುವ ಸಂಗತಿ ನನ್ನ ಗಮನಕ್ಕೆ ಬಂದಿದೆ. ಇನ್ನು ಮೇಲೆ ನೀನು ಇಂತಹ ಕೃತ್ಯಗಳಿಗೆ ಕೈಹಾಕಿದರೆ ಇಸ್ಲಾಮ್ ಧರ್ಮದ ನಿಯಮಗಳನುಸಾರ ನೀನು ಪ್ರತಿಫಲಗಳನ್ನು ಪಡೆಯುವೆ".

### ಪತ್ರ 6: (22-03-1789) ಕೊಡಂಗೇರಿ ಅಬ್ದುಲ್ ಖಾದಿಗೆ:

"ಸುಮಾರು ಹನ್ನೆರಡು ಸಾವಿರ (12000) ನಾಸ್ತಿಕರನ್ನು ಇಸ್ಲಾಮಿಗೆ ಮತಾಂತರಿಸಲಾಗಿದೆ. ಅವರಲ್ಲಿ ಕೆಲವು ಸೈನಿಕರು ನಂಬೂದರಿಗಳು. ಈ ಅಂಶವನ್ನು ಆ ಪ್ರದೇಶದ ಇತರರ ಗಮನಕ್ಕೆ ತರತಕ್ಕದ್ದು. ಇತರರನ್ನೂ ಆಹ್ವಾನಿಸಿ ಅವರನ್ನು ಇಸ್ಲಾಮಿಗೆ ಮತಾಂತರಗೊಳಿಸು. ಈ ವಿಷಯದಲ್ಲಿ ನಂಬೂದರಿಗಳು, ಇತರರು ಎಂಬ ಭೇದ ಬೇಡ. ಮತಾಂತರ ಆದವರಿಗೆ ನೀಡಲಾಗುವ ವಿಶೇಷ ಉಡುಪುಗಳು ಸರಬರಾಜಾಗುವ ತನಕ ಅವರು ಕಾಯಬೇಕಾಗುತ್ತದೆ ಎಂಬ ವಿಷಯವನ್ನು ಅವರಿಗೆ ಮನವರಿಕೆ ಮಾಡಿಕೊಡು".

**ಪತ್ರ 7: (18-01-1790) ಸೈಯದ್ ಅಬ್ದುಲ್ ಮಲ್ ಮಲಕ್ ಗೆ**

"ಪ್ರವಾದಿ ಮಹಮ್ಮದರ ಕೃಪೆ ಮತ್ತು ಅಲ್ಲಾಹನ ದಯೆಯಿಂದ ನಾವು ಕಲ್ಲಿಕೋಟೆಯ ಸುಮಾರು ಶೇಕಡಾ ಎಪ್ಪತ್ತೈದರಷ್ಟು ನಾಸ್ತಿಕರನ್ನು ಇಸ್ಲಾಮಿಗೆ ಮತಾಂತರಿಸಿದ್ದೇವೆ. ಕೊಚ್ಚಿಯ ಗಡಿ ಪ್ರದೇಶಗಳಲ್ಲಿ ಇಸ್ಲಾಮಿಗೆ ಮತಾಂತರಗೊಂಡಿರದವರು ಕೆಲವರು ಇನ್ನೂ ಇದ್ದಾರೆ. ಅವರನ್ನೂ ತಕ್ಷಣ ಮತಾಂತರಗೊಳಿಸಲು ಸಂಕಲ್ಪಿಸಿದ್ದೇನೆ. ಇದನ್ನು ನಾನು ಒಂದು 'ಧರ್ಮಯುದ್ಧ'ವೆಂದೇ ಪರಿಗಣಿಸುತ್ತೇನೆ".

**ಪತ್ರ 8: (19-01-1790) ಬದ್ರು ಸುಸ್ಮಾನ್ ಖಾನಗೆ ಬರೆದ ಪತ್ರ**

"ಇತ್ತೀಚೆಗೆ ನಾವು ಸುಮಾರು ನಾಲ್ಕು ಲಕ್ಷ (4,00,000) ಜನರನ್ನು ಇಸ್ಲಾಮಿಗೆ ಮತಾಂತರಿಸುವ ವಿಷಯದಲ್ಲಿ ಸಾಧಿಸಿದ ಯಶಸ್ಸು ನಿನ್ನ ಗಮನಕ್ಕೆ ಬಂದಿರಬಹುದು. ವಿನಾಶದ ಅಂಚೆಗೆ ತಲುಪಿರುವ ರಾಮನ್ ನಾಯರನ ವಿರುದ್ಧ ದಂಡೆತ್ತಿ ಹೋಗಲು ನಿರ್ಧರಿಸಿಯಾಗಿದೆ. ಅವನನ್ನು ಅವನ ಪ್ರಜೆಗಳ ಸಹಿತ ಮತಾಂತರಗೊಳಿಸಿ ಸಂತೋಷ ಪಡುವವರೆಗೆ ನಾನು ಶ್ರೀರಂಗಪಟ್ಟಣಕ್ಕೆ ವಾಪಸ್ ಹೋಗದಿರಲು ನಿರ್ಧರಿಸಿದ್ದೇನೆ."

**ಲೇಖಕರ ಟಿಪ್ಪಣಿ**:

ವಿನಾಶದ ಅಂಚನ್ನು ತಲುಪಿರುವನೆಂದು ಪತ್ರ-8ರಲ್ಲಿ ಹೇಳಲಾದ ರಾಮನ್ ನಾಯರ್ ಎಂಬ ರಾಜ ಬೇರೆ ಯಾರೂ ಅಲ್ಲ, "ಧರ್ಮರಾಜ"ನೆಂದು ಖ್ಯಾತನಾದ ಸುಪ್ರಸಿದ್ಧ ರಾಮವರ್ಮ ಮಹಾರಾಜ. ಟಿಪ್ಪುವು ತನ್ನ ಮತಾಂತರದ ಅಮಾನವೀಯ ಹೇಯ ಕೃತ್ಯಗಳನ್ನು ತಿರುವಾಂಕೂರು ಪ್ರಾಂತಕ್ಕೆ ವಿಸ್ತರಿಸಲು ಸಾಧ್ಯವಾಗಲಿಲ್ಲ. ಅದಕ್ಕೆ ಕಾರಣ ತಿರುವಾಂಕೂರು ಸೈನ್ಯದ ಕೆಚ್ಚು ಹಾಗೂ ಕೇಶವ ಪಿಳ್ಳೆಯ ಧೈರ್ಯ. ಒಂದು ವೇಳೆ ಟಿಪ್ಪುವು ದುಸ್ಸಾಹಸ ಮಾಡಿ ತಿರುವಾಂಕೂರು ಕಡೆ ಆಕ್ರಮಣ ಮಾಡಿದ್ದಲ್ಲಿ ಅವನ ಗತಿ ಏನಾಗುತ್ತಿತ್ತೆಂಬುದನ್ನು ಊಹಿಸಿರಿ.

ಇಲ್ಲಿಗೆ ಸರ್ದಾರ್ ಪಣಿಕ್ಕರರ ಲೇಖನ ಮುಕ್ತಾಯಗೊಳ್ಳುತ್ತದೆ.

**ಲೇಖಕನ ಟಿಪ್ಪಣಿಗಳು**:

ಮೇಲಿನ ಟಿಪ್ಪು ಪತ್ರಗಳು, 'ಟಿಪ್ಪುವೇ ಸ್ವತಃ ಅಫಘಾನಿಸ್ತಾನದ' ಮತ್ತು ತುರ್ಕಿಯ ದೊರೆಗಳಿಗೆ ತನ್ನ ಕೈಯಾರೆ ಬರೆದ ಪತ್ರಗಳು, ಅವನ ನಿಜವಾದ ಅಂತರಂಗವನ್ನು ಬಿಚ್ಚಿಡುತ್ತವೆ. ತುರ್ಕಿಯ ಖಲೀಫನಿಗೆ ಬರೆದ ಪತ್ರದ ಒಂದು ಭಾಗ ಹೀಗಿದೆ. "ಅಲ್ಲಾಹನೇ ಹಿಂದೂಸ್ಥಾನದ ಸಂರಕ್ಷಕ ಮತ್ತು ಪಾಲಕ". ಅವನೇ ಕಟ್ಟಿಸಿದ ಶ್ರೀರಂಗಪಟ್ಟಣದ ಮಸೀದಿಯ ಉತ್ತರಭಾಗದ ಗೋಡೆಯ ಶಾಸನದ ಇಂಗ್ಲೀಷ್ ಅನುವಾದ ಹೀಗಿದೆ. "Burn them (infidels) as did



the Prophet did in the case of Bavarat, sink them in water, cut down their trees and destroy their fields". (ಎಪಿಗ್ರಾಫಿಯ ಕರ್ನಾಟಿಕ: ಶ್ರೀರಂಗಪಟ್ಟಣದ 47ನೇ ಶಾಸನ) ಅವನು ಆ ದೃಷ್ಟಿಯಿಂದ ಖುರಾನಿನ ಬೋಧನೆಯನ್ನು ಬದುಕಿನಲ್ಲಿ ಕಟ್ಟು ನಿಟ್ಟಾಗಿ ಆಚರಿಸಿದವನು.

ಅನ್ಯರು ಟಿಪ್ಪು ಸುಲ್ತಾನನ ಬಗ್ಗೆ ಬರೆದಾಗ, ಅವನಿಂದ ಉಪಕೃತರಾಗಿದ್ದರೆ ಹೊಗಳುತ್ತಾರೆ, ಅಪಕೃತರಾಗಿದ್ದರೆ ತೆಗಳುತ್ತಾರೆ. ಆದರೆ ಟಿಪ್ಪುವೇ ಬರೆದ ವೈಯಕ್ತಿಕ ದಾಖಲೆಗಳು ಕೊಡುವ ಚಿತ್ರ ಒಂದೇ: ಅವನಿಗೆ ಇಡೀ ಜಗತ್ತು ಮುಸ್ಲಿಮರು ಮತ್ತು ಮುಸ್ಲಿಮೇತರರು ಎಂದು ಇಬ್ಭಾಗವಾಗಿ ಕಾಣಿಸುತ್ತಿತ್ತು. ಮುಸ್ಲಿಮೇತರರು ಒಂದೋ ಮುಸ್ಲಿಮರಾಗಬೇಕಿತು,. ಇಲ್ಲವೇ ಕೊಲೆಯಾಗಬೇಕಿತ್ತು, ಅವನೊಬ್ಬ ಅಪ್ಪಟ ಧರ್ಮಾಂಧ, ಕ್ರೂರಿ. ಅವನು ತನ್ನ ಆಳ್ವಿಕೆಯ ಮೈಸೂರು ರಾಜ್ಯದಲ್ಲಿ ಕ್ರೂರ ರೀತಿಯಲ್ಲಿ ವರ್ತಿಸದಿದ್ದರೆ, ಅವನು ಇಲ್ಲಿನ ಧಾರ್ಮಿಕ ಸಂಸ್ಥೆಗಳಿಗೆ ದತ್ತಿ ಕೊಟ್ಟಿದ್ದರೆ ಅದಕ್ಕೆ ಕಾರಣಗಳು ತೀರ ಸ್ಪಷ್ಟ: ತನ್ನ ಹಿಂದೂ ಅಧಿಕಾರಿಗಳನ್ನು ಸುಪ್ರೀತರನ್ನಾಗಿ ಇಡುವುದು. ಅವನ ಕ್ರೌರ್ಯವೆಲ್ಲ ದೂರದ ಮಲಬಾರಿಗೆ ಕೇಂದ್ರೀಕೃತವಾಗಿತ್ತು. ಬ್ರಿಟಿಷರಂತೆಯೇ ಫ್ರೆಂಚರೂ ಭಾರತದ ಕೆಲವು ಭಾಗಗಳನ್ನು ಆಕ್ರಮಿಸಿದವರು. ಅಂಥ ಫ್ರೆಂಚರ ಸಹಾಯವನ್ನು ಬ್ರಿಟಿಷರ ವಿರುದ್ಧ ಬಳಸಿಕೊಂಡ ಅವನು ರಾಷ್ಟ್ರಪ್ರೇಮಿ ಹೇಗಾದಾನು? ಇಮ್ಮಡಿ ಕೃಷ್ಣರಾಜ ಒಡೆಯರ್ ಪತ್ನಿ ಮಹಾರಾಣಿ ಲಕ್ಷ್ಮಮ್ಮಣ್ಣಿ 1796ರಲ್ಲಿ ತಿರುಮಲರಾವ್‌ಗೆ ಬರೆದ ಪತ್ರದಲ್ಲಿ ಟಿಪ್ಪು ಕೈಲಿ ತಾನು ಅನುಭವಿಸುತ್ತಿರುವ ದೈಹಿಕ ಮಾನಸಿಕ ತೀವ್ರ ಯಾತನೆಯನ್ನು ತೋಡಿಕೊಳ್ಳುತ್ತ. ಟಿಪ್ಪುವನ್ನು "ಅಮಾನುಷ ರಾಕ್ಷಸ" ಎಂದಿದ್ದಾಳೆ. ಅದು ನಿಜವಾದ ಟಿಪ್ಪು: ಖಚಿತ ವಾಸ್ತವ. ಹೀಗಿರುವಾಗ ಅವನನ್ನು ವೈಭವೀಕರಿಸುತ್ತಿರುವ ಮನೋಧರ್ಮವನ್ನು ವಿವೇಕವೆನ್ನಬಹುದೇ?

* * * *

## 5. ಟಿಪ್ಪು ಖಡ್ಗ ಶಾಸನ – ಅವನ ನಿಜಸ್ವರೂಪದ ಸಂಕೇತ

'ಮೈಸೂರು ಹುಲಿ' ಟಿಪ್ಪು ಸಾವಿನ ನಂತರ (1799) ಅವನ ಖಡ್ಗ ಮತ್ತು ಇತರ ಅವನ ವಸ್ತುಗಳನ್ನು ಹಿರಿಯ ಬ್ರಿಟಿಷ್ ಅಧಿಕಾರಿ ಮಾರ್ಕ್ವಿಸ್ ವೆಲ್ಲೆಸ್ಲಿಗೆ ಬ್ರಿಟಿಷ್ ಸೇನೆಯ ಪರವಾಗಿ ನೀಡಿದರು. ಲಂಡನ್ನಿನಲ್ಲಿದ್ದ ಅವುಗಳನ್ನು ಈಚೆಗೆ ಅನಿವಾಸಿ ಭಾರತೀಯರ ಪ್ರತಿಭಟನೆಯ ನಡುವೆಯೇ ನಡೆದ ಹರಾಜಿನಲ್ಲಿ ಕರ್ನಾಟಕದ ಶ್ರೀಮಂತರೊಬ್ಬರು ಬಿಕರಿಸಿದುದನ್ನು ಕನ್ನಡ ಪತ್ರಿಕೆಯೊಂದು ವರದಿ ಮಾಡುತ್ತ ಆ ಶ್ರೀಮಂತರನ್ನು 'ಬೆಂಗಳೂರು ಹುಲಿ' ಎಂದು ಕರೆಯಿತು. ಆ ಹರಾಜಿನಲ್ಲಿ ಕೊಂಡ ವಸ್ತುಗಳಲ್ಲಿ ಸುಪ್ರಸಿದ್ಧ ಖಡ್ಗವೂ ಒಂದು. ಅದು 'ಟಿಪ್ಪು ಖಡ್ಗ'–The Sword of Tippoo'. ಮೈಸೂರು ಹುಲಿಯ ಖಡ್ಗವನ್ನು ಬೆಂಗಳೂರು ಹುಲಿಯು ಪಡೆದುಕೊಂಡಿದೆ – ಹಣ ಕೊಟ್ಟು.

**ಖಡ್ಗದ ಬರಹ:** ಆ ಖಡ್ಗದ ಮೇಲಿರುವ ಪರ್ಷಿಯನ್ ಭಾಷೆಯ ಬರಹವನ್ನು ಸಿ. ಹಯವದನರಾಯರು 1930ರಷ್ಟು ಹಿಂದೆಯೇ ಇಂಗ್ಲೀಷಿಗೆ ಅನುವಾದ ಮಾಡಿ ತಮ್ಮ Mysore Gazetteer ಕೃತಿಯಲ್ಲಿ ಪ್ರಕಟಿಸಿದ್ದಾರೆ (Vol. II,Part 4, 2697-8). ಅದರ ಕೆಲವು ಭಾಗಗಳು ಹೀಗಿವೆ. "My victorious sabre is lightning for the destruction of the unbelievers. Haidar, the Lord of Faith, is victoriuos for my advantage..... Thou art our Lord, support us agaisnt the people who are unbelievers .... Oh Lord, make him victorious, who promoteth the faith of the Muhammad" (ಪೂರ್ಣ ಪಾಠಕ್ಕೆ ಅನುಬಂಧ ನೋಡಿ)

"Unbelievers" ಎಂದರೆ 'ಕಾಫಿರರು', ಹಿಂದೂಗಳು ಸೇರಿದಂತೆ ಇಸ್ಲಾಂ ಧರ್ಮದಲ್ಲಿ ನಂಬಿಕೆಯಿಲ್ಲದಿರುವ ಎಲ್ಲರೂ. ಇಲ್ಲಿಯ 'ಹೈದರ್' ಪ್ರವಾದಿ ಮಹಮ್ಮದನ ಅಳಿಯ.

**ಆಶಯಕ್ಕೆ ಪೂರಕ ಸಾಮಗ್ರಿ:** ಮುಸ್ಲಿಮರಲ್ಲದವರನ್ನು ನಾಶಪಡಿಸಬೇಕೆಂಬ ಖಡ್ಗದ ಮೇಲಿನ ಆಶಯಕ್ಕೆ ಪೂರಕವಾಗಿ, ಅವನೇ ಹಾಕಿಸಿದ ಶ್ರೀರಂಗಪಟ್ಟಣ ಗುಂಬಜ್ ಶಾಸನ (1788) ಹೀಗೆ ಹೇಳುತ್ತದೆ.

"........ Prepare yourselves with the necessary equipment, therefore, to fight with infidels as did the Prophet.... Burn them as did the Prophet in the case of Bavarat, sink them in water, cut down their trees



and destroy their fields..... " (ಎಪಿಗ್ರಾಫಿಯ ಕರ್ನಾಟಿಕ III: ಶ್ರೀರಂಗಪಟ್ಟಣ ನಂ. 16) 'infidels' ಎಂದರೆ ಮುಸ್ಲಿಮರಲ್ಲದವರು/ಕಾಫಿರರು.

ಬೆಂಗಳೂರಿನಿಂದ ಮೈಸೂರಿಗೆ ಹೋಗುವ ಮಾರ್ಗದಲ್ಲಿ ಬಲಗಡೆ ಶ್ರೀರಂಗಪಟ್ಟಣದ ಕೋಟೆ ದ್ವಾರದಲ್ಲಿ ಎದ್ದು ಕಾಣುವ ಮಸೀದಿಯು ಹಿಂದೂ ದೇವಾಲಯವನ್ನು ಕೆಡವಿ ಟಿಪ್ಪುವೇ ಕಟ್ಟಿಸಿದ್ದು (ಅದನ್ನು ಯಾರು ಬೇಕಾದರೂ ಪರಿಶೀಲಿಸಬಹುದು) ಅಲ್ಲಿನ ಶಾಸನ ಹೀಗಿದೆ. "Oh Almighty God! dispose the whole body of infidels! ..... cause death to be near them, cut off from them the means of sustenance....."

**ಟಿಪ್ಪು ಪತ್ರಗಳು** : ಮೇಲಿನ ಅವನ ಮಾತುಗಳು "unbelievers", 'Infidels' ಇವು ಅವನ ಬದ್ಧ ವೈರಿಗಳಾಗಿದ್ದ ಇಂಗ್ಲೀಷರಿಗೆ ಮಾತ್ರ ಅನ್ವಯವಾಗುತ್ತವೆಯೆಂದು ವ್ಯಾಖ್ಯಾನಿಸುವುದು ಬಹು ಸುಲಭ. ಅವನ ಆಪ್ತರಾಗಿದ್ದ ಫ್ರೆಂಚರೂ ಬ್ರಿಟಿಷರಂತೆ ಕ್ರಿಶ್ಚಿಯನ್ನರು ಎಂದು ಹೇಳವುದೂ ಸುಲಭ. ಅವನ ತೀವ್ರ ರೋಷ ಇಂಗ್ಲೀಷರ ಮೇಲಿತ್ತು ಎಂಬುದು ನಿಜ. ಅವನೇ ಸ್ವತಃ ತನ್ನ ಕೈಯಾರೆ ದೂರದ ಮಲಬಾರ್ ಪ್ರದೇಶದ ಸ್ವಧರ್ಮೀಯ ಸೇನಾಪತಿಗಳಿಗೆ ಪರ್ಷಿಯನ್ ಭಾಷೆಯಲ್ಲಿ ಬರೆದ ಪತ್ರಗಳು ಲಂಡನ್ನಿನಲ್ಲಿದ್ದು ಅವುಗಳನ್ನು 1923ರಲ್ಲಿ ಸರ್ದಾರ್ ಕೆ.ಎಂ. ಪಣಿಕ್ಕರರು ಮಲಯಾಳಂ ಭಾಷೆಗೆ ಅನುವಾದಿಸಿ ಪ್ರಕಟಿಸಿದ್ದರು. ಆ ಪತ್ರಗಳನ್ನು ಕಲ್ಲಿಕೋಟೆಯ ವಿಶ್ವವಿದ್ಯಾಲಯದಿಂದ ತರಿಸಿ, ಮಿತ್ರರಿಂದ ಕನ್ನಡಕ್ಕೆ ಅನುವಾದ ಮಾಡಿಸಿ ಟಿಪ್ಪಣಿ ಸಮೇತ ನಾನು ಪ್ರಕಟಿಸಿದ್ದೇನೆ. (ಕಸ್ತೂರಿ. ಯುಗಾದಿ ವಿಶೇಷಾಂಕ. 2005). ಅಲ್ಲಿನ ಕೆಲವು ಪತ್ರ ಭಾಗಗಳು ಹೀಗಿವೆ "ಪ್ರವಾದಿ ಮಹಮ್ಮದರ ಕೃಪೆ ಮತ್ತು ಅಲ್ಲಾಹನ ದಯೆಯಿಂದ ನಾವು ಕಲ್ಲಿಕೋಟೆಯ ಸುಮಾರು ಶೇ. 75ರಷ್ಟು ನಾಸ್ತಿಕರನ್ನು ಮತಾಂತರಿಸಿದ್ದೇವೆ. (18–1–1970ರ ಪತ್ರ); "ದೈವದಲ್ಲಿ ನಂಬಿಕೆಯಿಲ್ಲದ ಎಲ್ಲ ನಾಸ್ತಿಕರನ್ನು ಬಂಧಿಸಿ ಕೊಲ್ಲಬೇಕು" (14–12–1788ರ ಪತ್ರ); "ಇತ್ತೀಚೆಗೆ ನಾವು ಸುಮಾರು ನಾಲ್ಕು ಲಕ್ಷ ಜನರನ್ನು ಮತಾಂತರಿಸಿದ್ದೇವೆ" (18–1–1979). ಇನ್ನೂ ಕೆಲವು ಪತ್ರಗಳು ಹೀಗಿವೆ. ಟಿಪ್ಪು ಅಪಘಾನಿಸ್ತಾನದ ದೊರೆ ಜಮಾನ್ ಶಾಹನಿಗೆ ಬರೆದ ಪತ್ರ : (5–2–1797). "ಅಲ್ಲಾಹ ಮತ್ತು ಅವನ ಪ್ರವಾದಿಯ ಆದೇಶವನ್ನು ಒಪ್ಪಿ ನಮ್ಮ ಧರ್ಮದ ಶತ್ರುಗಳ ವಿರುದ್ಧ ಧರ್ಮಯುದ್ಧವನ್ನು ಹೂಡುವಲ್ಲಿ ನಾವಿಬ್ಬರೂ ಒಂದುಗೂಡಬೇಕಾಗಿದೆ". ಅದೇ ದೊರೆಯು ಟಿಪ್ಪುವಿಗೆ ಬರೆದ ಉತ್ತರದಲ್ಲಿ ಹೀಗಿದೆ; "ನಾವು ಅವರ ಮೇಲೆ ಹಾಗೂ ಬಹುದೇವತಾ ಉಪಾಸಕರಾಗಿರುವ ಹಿಂದೂಗಳ ಮೇಲೆ ಯುದ್ಧವನ್ನು ಹೂಡುವ ಸಲುವಾಗಿ ನಮ್ಮ ವಿಜಯಶೀಲ ಸೈನ್ಯದೊಂದಿಗೆ ಶೀಘ್ರವಾಗಿ ಹೊರಡಲಿದ್ದೇವೆ".

'Unbelievers', 'Infidels', 'Kafirs', ಇವು ಕ್ರಿಶ್ಚಿಯನ್ನರಂತೆ ಹಿಂದೂಗಳನ್ನೂ ಒಳಗೊಂಡಿವೆಯೆಂಬುದು ತೀರ ಸುಸ್ಪಷ್ಟ ತಾನೇ!

**ನಿಜ ಟಿಪ್ಪು**: ಮೇಲಿನ ದಾಖಲೆಗಳು ಅವನೇ ಸ್ವತಃ ಬರೆಯಿಸಿದ ಶಾಸನಗಳು ಹಾಗೂ ಬರೆದ ಪತ್ರಗಳು: ಆ ಕಾರಣ ಹೆಚ್ಚು ವಿಶ್ವಾಸಾರ್ಹ. ಅವನು ಸತ್ತಮೇಲೆ ಅವನ ಆಪ್ತರು ಅವನನ್ನು ಸಮಾಧಿ ಮಾಡಿ ಹಾಕಿಸಿದ ಶ್ರೀರಂಗಪಟ್ಟಣದ ಗುಂಬಜಿನ ಟಿಪ್ಪು ಮರಣ ಶಾಸನ ಹೀಗಿದೆ.–

"The light of Islam and the faith departed this world. Tipu fell a martyr for the religion of the Muhammad" ಇದು ಟಿಪ್ಪುವನ್ನು ಅವನ ಸುತ್ತಮುತ್ತಣ ಆಪ್ತ ಸಮಾಜ ಸರಿಯಾಗಿ ಅರ್ಥ ಮಾಡಿಕೊಂಡಿದ್ದು. ಅವನು ಇಸ್ಲಾಮಿಗೆ ಅಂತೆಯೇ ತನ್ನ ವೈಭವಕ್ಕಾಗಿ, ಭೋಗಕ್ಕಾಗಿ, ಅಧಿಕಾರಕ್ಕಾಗಿ ಸಾಹಸವನ್ನು ಮೆರೆದನು. ಅವನ ಸಾವಿನಿಂದ 'ಇಸ್ಲಾಮಿನ ಜ್ಯೋತಿ' ಯೊಂದು ಕಣ್ಮರೆಯಾಯಿತು. ಅದು ನಿಜವಾದ ಟಿಪ್ಪು. ಅಧಿಕಾರಮತ್ತನಾಗಿದ್ದ ಅವನು ತನ್ನ ವೈಭವಕ್ಕಾಗಿ ಇಸ್ಲಾಮೀಕರಣಕ್ಕಾಗಿ ಎಂತಹ ಕ್ರೌರ್ಯಕ್ಕೂ ಸಿದ್ಧನಿದ್ದನೆಂಬುದು ಅವನದೇ ಪತ್ರಗಳಿಂದ, ಶಾಸನಗಳಿಂದ, ಅವನ ಸ್ವಜಾತೀಯರ ಬರಹಗಳಿಂದ ಸಾಬೀತಾಗುತ್ತದೆ. ಅವನು ತನ್ನ ಮತಕ್ಕಾಗಿ ಮಡಿದ 'martyr', ಪ್ರಜೆಗಳಿಗಾಗಿ ಅಲ್ಲ.

**ಇತರರ ಹೇಳಿಕೆಗಳು**; ಅವನ ಮುಸ್ಲಿಂ ಸಮಕಾಲೀನ ಕಿರ್ಮಾನಿ ಮಾತುಗಳು ಹೀಗಿವೆ: "His chief aim and object was, however the encouragement and the protection of the Muhammadan religion and the religious maxims or rules of the Sunni sect." (Sunni – ಸುನ್ನಿಗಳು) ಟಿಪ್ಪುವಿನ ಸಮಕಾಲೀನ ವಿಲಿಯಮ್ ಕಿರ್ಕ್ ಪ್ಯಾಟ್ರಿಕನು ಕ್ರಿ.ಶ. 1811ರಲ್ಲಿ ಟಿಪ್ಪುವಿನ ಬೇರೆ ಬೇರೆ ಪತ್ರಗಳನ್ನು ಇಂಗ್ಲಿಷಿಗೆ ಅನುವಾದಿಸಿ ಪ್ರಕಟಿಸಿದ್ದಾನೆ. (Selected letters of Tippoo Sultan to various public functionaries) ಆ ಕೃತಿಯನ್ನು ಟಿಪ್ಪು ಸಾವಿನ ಬಳಿಕ ಅವನ ಖಡ್ಗವನ್ನು ಉಡುಗೊರೆಯಾಗಿ ಪಡೆದ ರಿಚರ್ಡ್ ಮಾರ್ಕ್ವಿಸ್ ವೆಲ್ಲೆಸ್ಲಿಗೆ ಅರ್ಪಣೆ ಮಾಡಿದ್ದಾನೆ. ಆ ಪತ್ರಗಳನ್ನು ಆಳವಾಗಿ ಅಧ್ಯಯನ ಮಾಡಿರುವ ಕಿರ್ಕ್ ಪ್ಯಾಟ್ರಿಕನ ಪ್ರಸ್ತಾವನೆಯ ಕೆಲವು ಮಾತುಗಳು ಗಮನಾರ್ಹ. ಅವನ ಪ್ರಕಾರ ಟಿಪ್ಪುವಿನದು "Intolerant religious zeal and bigotry. The Kuran taught him that it was not necessary to keep faith with infidels or the enemies of the true religion". (p. XIII-IV). ಅವನ ಆದೇಶಗಳು ನಮ್ಮ ಕಣ್ಣಲ್ಲಿ ಕ್ರೂರ ಕೃತ್ಯಗಳು, ಅವನಿಗೆ ಅವು ಪುಣ್ಯ ಕಾರ್ಯಗಳು, (p. XIII) ; ಒಮ್ಮೆ ಒಂದು ಹಳ್ಳಿಯ ಗಂಡಸರನ್ನೆಲ್ಲ ನಿರ್ವೀರ್ಯಗೊಳಿಸಿದ (ಪು 3); ರಹಸ್ಯಾಲೋಚನೆಗಳಿಗೆ ಬ್ರಾಹ್ಮಣರನ್ನು ಸೇರಿಸಬಾರದೆಂಬ ಅವನ ಒಂದು ಪತ್ರವಿದೆ. (ಪು 8); ಹಿಂದೂ ಧರ್ಮದಿಂದ ಮತಾಂತರಗೊಂಡಿದ್ದ ಒಬ್ಬ ಮುಸ್ಲಿಮನು ಬಹುಶಃ ಹಿಂದಿನ ಅಭ್ಯಾಸ ಬಲದಿಂದ ವಿಗ್ರಹರಾಧನೆ ಮಾಡಿದ್ದಕ್ಕೆ ಅವನನ್ನು ಬಂಧಿಸಿ ಇಸ್ಲಾಮಿಕ್ ಕಾನೂನು ಪ್ರಕಾರ ಶಿಕ್ಷೆ ವಿಧಿಸಲು ಬಿದನೂರಿನ ಕಾಡಟಿಜಿಗೆ ಪತ್ರ ಬರೆದಿದ್ದಾನೆ (ಪು 272). ಕ್ರಿ.ಶ. 1817ರಲ್ಲಿ "History of Mysore" ಕೃತಿ ಬರೆದ ಮಾರ್ಕ್



ವಿಲ್ಕ್ಸ್, ಟಿಪ್ಪು ಬಗ್ಗೆ ಹೇಳಿರುವ ಮಾತುಗಳು ಇವು "..... (Tipu) was the last Muhammadan prince, after a long period of better feeling., who propogated the religion by the edge of the sword" (vol. II P. 766) ಟಿಪ್ಪು ಕಣ್ಮುಚ್ಚಿದ ಐದನೇ ವರ್ಷದಲ್ಲಿ (1804) ಅವನ ದಿವಾನ ಪೂರ್ಣಯ್ಯನವರು ಶ್ರೀರಂಗಪಟ್ಟಣದಲ್ಲಿ ಸೇತುವೆ ಕಟ್ಟಿಸಿ, ಹಿರಿಯ ಬ್ರಿಟಿಷ್ ಅಧಿಕಾರಿ ಮಾರ್ಕ್ವಿಸ್ ವೆಲ್ಲೆಸ್ಲಿಯ ಹೆಸರನ್ನು 'ಕೃತಜ್ಞತೆ'ಯಿಂದ ಆ ಸೇತುವೆಗೆ ಇಟ್ಟರು. ಟಿಪ್ಪುವನ್ನು ತೀರ ಹತ್ತಿರದಿಂದ ಬಲ್ಲ ಪೂರ್ಣಯ್ಯನವರ ಆ ಕೃತಜ್ಞತೆಯಲ್ಲಿ ತಾನು ದಿವಾನರಾಗಿ ಮುಂದುವರಿಯುವ ಸ್ವಾರ್ಥದ ಬಯಕೆಯೂ ಇರಬಹುದು; ಟಿಪ್ಪುವಿನಿಂದ ಆಗುತ್ತಿದ್ದ ಧರ್ಮಧ್ವಂಸ ನಿಂತು ಹೋದುದರ ಸಮಾಧಾನದ ನಿಟ್ಟುಸಿರೂ ಇರಬಹುದು.

**ಅನ್ಯಧರ್ಮ ಸಹಿಷ್ಣು** : ಟಿಪ್ಪು ಮೇಲುಕೋಟೆ, ಶೃಂಗೇರಿ, ಶ್ರೀರಂಗಪಟ್ಟಣಗಳ ಹಿಂದೂ ಧಾರ್ಮಿಕ ಸಂಸ್ಥೆಗಳಿಗೆ ದತ್ತಿ ಕೊಟ್ಟುದು ದಾಖಲಾಗಿದೆ, ನಿಜ. ಶ್ರೀರಂಗಪಟ್ಟಣದ ರಂಗನಾಥ ದೇವಾಲಯದ ಏಳು ಬೆಳ್ಳಿ ಬಟ್ಟಲುಗಳ ಮೇಲೆ ಟಿಪ್ಪು ಹೆಸರಿದೆ (ನಂ. 12, 13, 14, 15 ಇತ್ಯಾದಿ), ಒಂದು ಶಾಸನ ಹೀಗಿದೆ – "ಕಳುಲೆ ಕಾಂತೈಯ್ಯನವರ ಶ್ಯಾವೆ ಟೀಪೂ ಸುಲತಾನ ಪಾಛಾರವರ ಧರ್ಮ". ಈ ಬೆಳ್ಳಿ ಬಟ್ಟಲುಗಳನ್ನೂ ಬೆಳ್ಳಿ ಪಂಚಾರತಿಯನ್ನೂ ಮಾಡಿಸಿದ ವ್ಯಕ್ತಿಗಳು ಬೆಳ್ಳಿಯನ್ನು ಪಡೆದದ್ದು ಟಿಪ್ಪುವಿನಿಂದ ಎಂಬುದು ಸೂಚಿತವಾಗುತ್ತದೆ. ಅಧಿಕಾರಿಗಳ ಪ್ರಾರ್ಥನೆ ಮೇರೆಗೆ ಅವು ಟಿಪ್ಪು ಮಾಡಿಸಿದ್ದೇ ಹೊರತು ಅವನೇ ದೈವಭಕ್ತಿಯಿಂದ ಮಾಡಿಸಿಕೊಟ್ಟ ವಸ್ತುಗಳು ಅಲ್ಲ. ಮೇಲುಕೋಟೆ, ಶೃಂಗೇರಿಗಳಿಗೂ ಅವನು ಕೊಟ್ಟ ದತ್ತಿಗಳ ಹಿಂದೆ ತನ್ನ ಬ್ರಾಹ್ಮಣ ಅಧಿಕಾರಿಗಳ ವಿಶ್ವಾಸ ಉಳಿಸಿಕೊಳ್ಳುವ ಉದ್ದೇಶವಿದ್ದಿತೆಂಬ ಊಹೆ ಖಂಡಿತ ನಿರಾಧಾರವಾದುದಲ್ಲ. ಅವನ ಆಡಳಿತ, ಅದರಲ್ಲೂ ಲೆಕ್ಕಪತ್ರಗಳ ಆಡಳಿತ ನಡೆಯಲು ಬ್ರಾಹ್ಮಣ ಅಧಿಕಾರಿಗಳ ಸಹಕಾರ ಅಗತ್ಯವಿತ್ತು. ರಹಸ್ಯಾಲೋಚನ ಸಭೆಗೆ ಬ್ರಾಹ್ಮಣರಿಗೆ ಪ್ರವೇಶವಿರಲಿಲ್ಲ. ಅವನು ಒಂದು ಘಟ್ಟದಲ್ಲಿ ಕೋಪದಿಂದ ಹಿಂದೂ ದೇವಾಲಯಗಳಿಗೆ ಆ ಹಿಂದೆ ಇತರರು ಹಾಗೂ ತಾನು ನೀಡಿದ್ದ ದಾನ ದತ್ತಿಗಳನ್ನೆಲ್ಲ ಮುಟ್ಟುಗೋಲು ಹಾಕಿಕೊಂಡದ್ದನ್ನು ಹಯವದನರಾಯರು ದಾಖಲಿಸಿದ್ದಾರೆ – "Lands and money allowances granted to Hindu pagodas as well as the service inams of Patels were confiscated" (Vol. 4, part, 4 p, 2629)" ಅವನು ತಿರುಚಿನಾಪಳ್ಳಿ ಮೇಲೆ ದಾಳಿ ಮಾಡಿ ಶ್ರೀರಂಗಂ ಕ್ಷೇತ್ರದ ರಂಗನಾಥಸ್ವಾಮಿ ದೇವಾಲಯವನ್ನು ಲೂಟಿ ಮಾಡಿದನು. ಅದೇ ಕೃತಿ. ಪು. 2589) ಅವನ ತೋರಿಕೆಯ ಭಕ್ತಿ ಶ್ರೀರಂಗಪಟ್ಟಣ ರಾಜಧಾನಿಯ ದೈವ ರಂಗನಾಥನ ಮೇಲೆ ಎಂಬುದು ಸ್ಪಷ್ಟವಾಗುವುದಿಲ್ಲವೆ?

**ಕೇರಳದ ಚರಿತ್ರೆ**: ನಾಗಂ ಅಯ್ಯರವರ "The Travancore State Manual" (vol. II)" ಹೀಗೆ ಹೇಳುತ್ತದೆ. - "The advent of Hyder Ali and Tippu Sultan ino the peaceful domains of Malabar with their horrible alternatives of con-

version into Islam or massacre and devastation of course added to the number of Mohammadan converts". (p. 110-11). Travancore Manual (1906. p. 230) ಹೀಗೆ ಹೇಳುತ್ತದೆ. - "He (Tipu) then invaded Malabar and persecuted the people and the chiefs, massacred all those who refused to embrace Islam". ತಿರುವಾಂಕೂರು ರಾಜ ಪ್ರಬಲನಾಗಿದ್ದುದರಿಂದ ಟಿಪ್ಪು ಆಟ ಅಲ್ಲಿ ನಡೆಯಲಿಲ್ಲ. ಹತ್ತೊಂಬತ್ತನೇ ಶತಮಾನದ ಆರಂಭದ ಪ್ರವಾಸಿ ಬುಕನನ್ ಮಾತುಗಳು ಇವು - "He paid no attention to the religious prejudices of the greater part of his subjects, but everywhere went only to destroy their temples, and gloried in having forced many thousands of them to adopt the Mussulman faith" (A journey from Madras through Mysore, Canara and Malabar, p 70-1) ಸಿ. ಹಯವದನರಾಯರೂ ಅಂತಹುದೇ ತೀರ್ಮಾನಕ್ಕೆ ಬಂದಿದ್ದಾರೆ – "His orders were that every being in the district (Malabar), without distinction should be honoured with Islam; that the houses of such as fled to avoid that honour should be burned...." ಅವನ ಉದ್ದೇಶ "Universal conversion". 'ಇಸ್ಲಾಂ ಮತಾಂತರಕ್ಕೆ ಒಪ್ಪಿದವರಿಗೆ ಇಸ್ಲಾಂ ಬಹುಮಾನವಾಗಿ ದೊರಕುತ್ತಿತ್ತು. ಒಪ್ಪದವರಿಗೆ ಮರಣ ದೊರಕುತ್ತಿತ್ತು'.

**ಕುರಾನ್‌ನಲ್ಲಿ ಖಡ್ಗ:** ಇಸ್ಲಾಮಿಕ್ ನಿಷ್ಠಾವಂತ ಅನುಯಾಯಿಯಾಗಿದ್ದ ಟಿಪ್ಪುವಿನ ಖಡ್ಗದ ಮೇಲಿನ ಬರಹವು ಧರ್ಮದ ನಿರ್ದೇಶನಕ್ಕನುಗುಣವಾಗಿರುವುದು ಸ್ವಾಭಾವಿಕ. ಟಿಪ್ಪು ತನ್ನನ್ನು ಮಹಮ್ಮದನಂತೆ ಇಸ್ಲಾಂ ಧರ್ಮದ ಸಂದೇಶವಾಹಕ ಎಂದೇ ಭಾವಿಸಿದ್ದನೆಂಬುದಕ್ಕೆ ಅವನ ಮುದ್ರೆಯ ಮೇಲಿರುವ ಬರಹ ಸಾಕ್ಷಿ – "I am the Messenger of the true faith".

**ಬೆಂಗಳೂರು ಹುಲಿ:** ಅಂತಹ ಟಿಪ್ಪುವಿನ ಖಡ್ಗವನ್ನು ಭಾರತಕ್ಕೆ ತಂದಿರುವ ವ್ಯಕ್ತಿ ಯಾರೇ ಆಗಿರಲಿ ಆತ ಮುಸ್ಲಿಮನಲ್ಲದಿದ್ದರೆ ಆತನಿಗೆ, ಆ ಖಡ್ಗದ ಮೇಲಿನ ಬರಹದ ಪ್ರಕಾರ, ಸಲ್ಲಬೇಕಾದ ಗೌರವ ಯಾವ ಬಗೆಯದು? ತೀರ ಸರಳವಾದ ಆದರೆ ಬೆಚ್ಚಿ ಬೀಳಿಸುವ ಪ್ರಶ್ನೆ. ಇಲ್ಲಿ ಯಾವುದೇ ವ್ಯಂಗ್ಯವಿಲ್ಲ. ಗ್ರಹಿಸುವವರಿಗೆ ಆಳವಾದ ನೋವೂ ಇಲ್ಲಿ ಕಾಣಬಹುದು. ಅಂತಹ ಟಿಪ್ಪು ಖಡ್ಗ ಮತ್ತು ಆತನ ಇತರ ವಸ್ತುಗಳು ಹೆಮ್ಮೆಪಡಬಹುದಾದ ಅವಶೇಷಗಳೇ?

**ಕೊನೆಯ ಮಾತು:** ಮೇಲಿನ ವಸ್ತುನಿಷ್ಠ ಮಾಹಿತಿಪೂರ್ಣ ಲೇಖನ ಓದಿದ ಎಲ್ಲರ, ಅಲ್ಲ ಕೆಲವರ ಕಣ್ಣಿಗಾದರೂ ನಾನು ಕೋಮುವಾದಿಯೆಂದು ಕಾಣಿಸಿದರೆ ಆಶ್ಚರ್ಯವಿಲ್ಲ. ಹನ್ನೆರಡನೆಯ ಶತಮಾನದ ವಚನಕಾರ್ತಿ ಸೂಳೆ ಸಂಕವ್ವೆಯ ಅಂಕಿತ 'ನಿರ್ಲಜ್ಜೇಶ್ವರ'' –



ಅತ್ಯಂತ ಧ್ವನಿಪೂರ್ಣ; ಅದು ನನ್ನ ಅಂಕಿತವಾಗಬಹುದಿತ್ತು. ಆದರೆ ಅದು ಸಂಕವ್ವೆಯದು. ಹಾಗಿದ್ದರೆ ಅದರ ಮಾದರಿಯ ಮೆಲೆ, ನನ್ನ ಅಂಕಿತ "ನಿರ್ಭಯೇಶ್ವರ" ಎಂದು ನಾನು ಭಾವಿಸಬಹುದೇ? ಸೂಳೆ ಸಂಕವ್ವೆಗೆ ನಾನು ಕೃತಜ್ಞ. (ಈ ಲೇಖನ ಬರೆಯುವಲ್ಲಿ ಹಲವು ವಿಷಯಗಳನ್ನು ಎಚ್.ಡಿ. ಶರ್ಮಾರ 'ಟಿಪ್ಪು–ನಿಜ ಸ್ವರೂಪ' (ಅನು: ಪ್ರಧಾನ್ ಗುರುದತ್ತ) ಕೃತಿಯಿಂದ ಪಡೆದಿದ್ದೇನೆ. ಅಲ್ಲಿಂದ ಸೂಚನೆ ಪಡೆದು ಹಲವು ಮೂಲಕೃತಿಗಳಿಗೇ ಹೋಗಿ. ವಿಷಯ ಸಂಗ್ರಹಿಸಿದ್ದೇನೆ. The Real Tipu ಅವರ ಒಂದು ವಸ್ತುನಿಷ್ಠ ಅಮೂಲ್ಯ ಕೃತಿ).

ಮುಂದಿನದು ಸಿ. ಹಯವದನರಾಯರು ತಮ್ಮ "History of Mysore" ಕೃತಿಯಲ್ಲಿ ನೀಡಿರುವ ಟಿಪ್ಪು ಖಡ್ಗದ ಮೇಲಿರುವ ಪರ್ಷಿಯನ್ ಭಾಷೆಯ ಶಾಸನದ ಯಥಾವತ್ತಾದ ಇಂಗ್ಲಿಷ್ ಅನುವಾದ (Vol. III . 1946. p 1072-3) .

A sword found in Tipu's bed- chamber was publicly presented by General Harris to General Baird, who had led the assault. The sword of Tipu, *i.e.,* the one he usually used and reckoned distinctively his own being one usually placed in his Musnud, was presented, on behalf of the British Army by Major Allan Deputy Quarter-Master - General in person at Madras, to the Marquess Wellesley. Major Allan was the first to visit the Marquess Wellesley after the conquest of Seringapatam. (Seringapatam fell on this 4th May and he visited the Governor-General at Madras on 30th May.) He was made Honorary Aid-de-Camp io the Governor-General in recognition of his meritorious services. On the handle of the sword presented by him to Marquess Wellesley was the following inscription.

"My victorious sabre is lightning for the destruction of the unbelievers. Haidar the Lord of the Faith, is victorious for my advantage. And moreover he destroyed the wicked race who were unbelievers. Praise be to him, who is the Lord of the Worlds! Thou art our Lord, support us against the people who are unbelievers. He to whom the Lord gives victory prevails over all (mankind). Oh Lord, make him victorious, who promoteth the faith of Muhammad. Confound him, who refuseth the faith of Muhammad;

and with hold us from those who so inclined. The Lord is predominant over his own works. Victory and conquest are from the Almighty. Bring happy tidings, Oh Muhammad, to the faithful; for God is the kind protector and is the most merciful of merciful. If God assists thee, thou will prosper. May the Lord God assist thee, Oh Muhammad, with mighty victory".

❋ ❋ ❋ ❋

## 6. ಟಿಪ್ಪು ಖಡ್ಗದ ಶಾಸನ ಮತ್ತು ಇತರ ಶಾಸನಗಳು

ಟಿಪ್ಪು ಸಾವಿನ ಬಳಿಕ (1799) ದೊರಕಿದ ಅವನ ಖಡ್ಗವನ್ನು ಮೇಜರ್ ಅಲೆನನು ಮಾರ್ಕೆಸ್ ವೆಲ್ಲೆಸ್ಲಿಗೆ ನೀಡಿದನು. ಅದೀಗ ಬೆಂಗಳೂರಿನ ವಿಜಯ ಮಲ್ಯರ ಬಳಿ ಸಂರಕ್ಷಿತವಾಗಿದೆ. (C. Hayawadana Rao. History of Mysore III. P170-1): ಈ ಕೃತಿಯಲ್ಲಿ ಅದರ ಮೇಲಿನ ಪರ್ಷಿಯನ್ ಭಾಷೆಯ ಶಾಸನದ ಇಂಗ್ಲಿಷ್ ಅನುವಾದ ನೀಡಲಾಗಿದೆ.

ಅದರ ಕನ್ನಡಾನುವಾದ ಇದು (The Real Tippu ಕೃತಿಯ ಕನ್ನಡ ಅನುವಾದ : ಪ್ರಧಾನ್ ಗುರುದತ್)

– "ನನ್ನ ಗೆಲುವಿನ ಕೊಂಕುಗತ್ತಿ ನಾಸ್ತಿಕರನ್ನು (=ಕಾಫಿರರು, ಮುಸ್ಲಿಮರಲ್ಲದ ಎಲ್ಲ ಹಿಂದೂ, ಕ್ರಿಶ್ಚಿಯನ್, ಜೈನ್, ಬೌದ್ಧ) ಕೊಲ್ಲುವ ಸಿಡಿಲಾಗುತ್ತದೆ. ಧರ್ಮದ ಒಡೆಯನಾಗಿರುವ ಹೈದರ್ ನನ್ನ ಅನುಕೂಲಕ್ಕಾಗಿ ವಿಜಯಿಯಾಗಿದ್ದಾನೆ. ಮೇಲಾಗಿ ಅವನು ನಾಸ್ತಿಕರ ದುಷ್ಟ ಜನಾಂಗವನ್ನು ನಾಶಪಡಿಸಿದ್ದಾನೆ. ಲೋಕಗಳ ಒಡೆಯನಾಗಿರುವ ಆ ಅಲ್ಲಾಹನಿಗೆ ನಮ್ಮ ಸ್ತುತಿ ಅರ್ಪಿತವಾಗಲಿ. ನೀನೇ ನಮ್ಮ ಒಡೆಯ, ನಾಸ್ತಿಕರಿಗೆ ವಿರುದ್ಧವಾಗಿ (ಹೋರಾಡಲು) ನಮಗೆ ಬೆಂಬಲವಾಗಿರು. ಯಾರಿಗೆ ಅಲ್ಲಾಹನು ವಿಜಯವನ್ನು ಕರುಣಿಸುತ್ತಾನೋ ಅವನು ಎಲ್ಲರನ್ನೂ ಮೀರಿ ನಿಲ್ಲುತ್ತಾನೆ. ಹೇ ಅಲ್ಲಾಹನೇ, ಮುಹಮ್ಮದರ ಧರ್ಮವನ್ನು ಅಭಿವರ್ಧಿಸುವಂಥವನನ್ನು ಜಯಶೀಲವಾಗಿಸು. ಮುಹಮ್ಮದರ ಧರ್ಮವನ್ನು ನಿರಾಕರಿಸುವಂಥವನನ್ನು ಹಾಳು ಮಾಡು. ಅಂಥ ಒಲವುಳ್ಳವರಿಂದ ನಮ್ಮನ್ನು ದೂರವಾಗಿರಿಸು. ಅಲ್ಲಾಹನೇ ತನ್ನ ಸೃಷ್ಟಿಯಲ್ಲಿ ಎಲ್ಲಕ್ಕಿಂತಲೂ ಮಿಗಿಲಾಗಿರುವಂಥವನು. ಗೆಲವು ಮತ್ತು ಗೆದ್ದುದರ ಮೇಲಿನ ಸ್ವಾಧೀನ ಇವೆರಡೂ ಅಲ್ಲಾಹನ ಕೃಪೆಯಿಂದಲೇ ಲಭಿಸುವಂಥವು. ಓ ಮುಹಮ್ಮದನೇ, ಆಸ್ತಿಕರಾಗಿರುವಂಥವರಿಗೆ (=ಮುಸಲ್ಮಾನರಿಗೆ) ಸುಖದ ಸಮಯವನ್ನು ತಂದು ಕೊಡು. ಏಕೆಂದರೆ ಅಲ್ಲಾಹನೇ ದಯಾಳುವಾದ ರಕ್ಷಕ ಹಾಗೂ ಕೃಪಾಳುಗಳಲ್ಲೇ ಅತ್ಯಂತ ಕೃಪಾಳುವಾಗಿರುವಂಥವನು. ಅಲ್ಲಾಹನು ನಿನಗೆ ನೆರವಾದರೆ, ನೀನು ಜಯಶಾಲಿಯಾಗುತ್ತೀಯಾ. ಓ ಮುಹಮ್ಮದನೇ, ಆ ಅಲ್ಲಾಹನು ಭರ್ಜರಿ ಜಯದೊಂದಿಗೆ ನಿನಗೆ ನೆರವಾಗಲಿ"

ಟಿಪ್ಪುವಿನ ಖಡ್ಗವೇ ಅವನ ಮನಸ್ಸು, ಅಭೀಪ್ಸೆ, ಆಕಾಂಕ್ಷೆ, ಧ್ಯೇಯ. ಆ ಖಡ್ಗವು ಕಾಫಿರರನ್ನು ಕೊಲ್ಲಲು ಮಿಂಚುತ್ತದೆ, ಸಿಡಿಲುತ್ತದೆ, ಘರ್ಜಿಸುತ್ತದೆ. ಮುಹಮ್ಮದನೇ ಎಲ್ಲ

ನಾಸ್ತಿಕ ಅಥವಾ ಕಾಫಿರರ ಜನಾಂಗವನ್ನೇ ನಾಶಪಡಿಸಿದವನು. ಆದ್ದರಿಂದ ಮುಹಮ್ಮದನ ಧರ್ಮವೇ ಅಥವಾ ಇಸ್ಲಾಂ ಒಂದೇ ಜಯಶೀಲವಾಗಬೇಕು. ಅಲ್ಲಾಹನು ಮುಮಿನರಿಗೆ ಅಥವಾ ನಂಬುವವರಿಗೆ (ಮುಸ್ಲಿಮರಿಗೆ) ಮಾತ್ರ ಸುಖವನ್ನು ನೀಡುತ್ತಾನೆ – ಏಕೆಂದರೆ ಅವನು ಕೃಪಾಳು.

ಇಸ್ಲಾಂ ಎಂದರೆ ಶಾಂತಿ; ಆದ್ದರಿಂದ ಇಸ್ಲಾಂ ಧರ್ಮವು ಶಾಂತಿ ಪ್ರತಿಪಾದಕ ಧರ್ಮವೆಂದು ಕೆಲವರು ನಂಬಿದ್ದಾರೆ. ಆದರೆ ವಾಸ್ತವ ಹೀಗೆ. ಇಸ್ಲಾಂ ಪ್ರಕಾರ ಜಗತ್ತು ಎರಡು ಬಗೆ : ಒಂದು 'ದಾರ್ ಉಲ್ ಇಸ್ಲಾಂ' (=ಶಾಂತಿಧಾಮ); ಇನ್ನೊಂದು ಬಗೆ "ದಾರ್ – ಉಲ್ – ಹರ್ಬ್" (= ಯುದ್ಧಧಾಮ). ಮುಮಿನರು (ನಂಬುವವರು, ಮುಸ್ಲಿಮರು) ಇರುವ ಜಗತ್ತು ಶಾಂತಿಧಾಮ; ಕಾಫಿರರು (ನಂಬದವರು, ಮುಸ್ಲಿಮೇತರರು) ಇರುವ ಜಗತ್ತು ಯುದ್ಧ ಧಾಮ. ಅಂತಹ ಯುದ್ಧಧಾಮವನ್ನು ಶಾಂತಿಧಾಮವನ್ನಾಗಿಸುವುದೇ ಎಲ್ಲರ ಕರ್ತವ್ಯ. ಹಾಗೆ ಶಾಂತಿಧಾಮವನ್ನಾಗಿಸಲು ಖಡ್ಗವನ್ನು ಹಿಡಿದು ಹೋರಾಡುವುದೇ "ಜಿಹಾದ್" – ಕಾಫಿರರು ಇಲ್ಲವೇ ಮುಮಿನರಾಗಬೇಕು, ಇಲ್ಲವೇ ಕೊಲ್ಲಲ್ಪಡಬೇಕು. ಈ ಹಿನ್ನೆಲೆಯಲ್ಲಿ ಇಸ್ಲಾಂ, ಜಿಹಾದ್ ಪದಗಳನ್ನು ನೋಡಬೇಕು. ಟಿಪ್ಪುವಿನ ಉದ್ದೇಶ ಇಡೀ ತನ್ನ ರಾಜ್ಯವನ್ನು (ಅಥವಾ ಭಾರತವನ್ನು ಅಥವಾ ವಿಶ್ವವನ್ನು) ಇಸ್ಲಾಮೀಕರಣ ಮಾಡುವುದೇ ಆಗಿತ್ತು ಎಂಬುದು ಸ್ಪಷ್ಟ. (ಕಾಫಿರ = Unbeliever in the Ministry of Mohmmed and Kuran; one who believes Christ, a Christian; all non Muslims. Dictionary of Islam. 1885, 1995).

**ಟಿಪ್ಪುವಿನ ಶಾಸನಗಳು**

(1) ಶ್ರೀರಂಗಪಟ್ಟಣದ "ಸಂಗಿನ್ ಮಸೀದಿ"ಯ ಉತ್ತರ ಗೋಡೆಗೆ ಒರಗಿಸಿ ನಿಲ್ಲಿಸಿರುವ ಕಲ್ಲಿನ ಮೇಲೆ 18–19ನೇ ಶತಮಾನದ ಲಿಪಿಯಲ್ಲಿರುವ ಕನ್ನಡ ಶಾಸನವು ಹಾಳಾಗಿ ಹೋಗಿರುವುದರಿಂದ (ಶ್ರೀರಂಗಪಟ್ಟಣ 45) ಅದರ ಬಹುತೇಕ ಭಾಗವು ಅರ್ಥವಾಗುವುದಿಲ್ಲ. ಮಧ್ಯೆ ಮಧ್ಯೆ ಅನೇಕ ಅಕ್ಷರಗಳು ನಾಶವಾಗಿವೆ. ಏಕೆ ನಾಶವಾಗಿವೆಯೋ ಊಹಿಸುವುದು ಕಷ್ಟ. ರಾಮಾನುಜ ಸಂಪ್ರದಾಯದ ಯಾರೋ ಗುರುಗಳು "ತುರುಕರಿಗೆ ಕೋಟ ಶಿಲಾಸೆಸಾನ" ಎಂಬ ಅರ್ಥವಾಗುವ ಒಂದು ವಾಕ್ಯವಿದೆ. ಎಂದರೆ ವೈಷ್ಣವ ಬ್ರಾಹ್ಮಣರು ಮುಸ್ಲಿಮರಿಗೆ ಹಾಕಿಸಿಕೊಟ್ಟ ಶಾಸನ. ಆದರೇ, ಇಡೀ ಶಾಸನದ ಆಶಯ ಸ್ವಲ್ಪವೂ ಅರ್ಥವಾಗುವುದಿಲ್ಲ. ಆದರೆ ಇಷ್ಟು ಮಾತ್ರ ನಿಜ: ಯಾವುದು ಈಗ "ಸಂಗಿನ್ ಮಸೀದಿ" ಎಂದು ಕರೆಯಿಸಿಕೊಳ್ಳುವುದೋ ಅದು ಹದಿನೆಂಟನೇ ಶತಮಾನದಲ್ಲಿ ಶ್ರೀ ವೈಷ್ಣವರು ಪೂಜಿಸುತ್ತಿದ್ದ ವಿಷ್ಣು ದೇವಾಲಯವಾಗಿದ್ದು,



ಅದು ಟಿಪ್ಪುವಿನ ಆಡಳಿತ ಕಾಲದಲ್ಲಿ ಮಸೀದಿಯಾಗಿ ಪರಿವರ್ತನೆಗೊಂಡಂತೆ ಕಾಣುತ್ತದೆ. ಏಕೆಂದರೆ ಟಿಪ್ಪುವಿನ ಬಳಿಕ (1799) ಆಳಿದ ದೊರೆಗಳೆಲ್ಲ ಮೈಸೂರು ಅರಸರು: ಅವರ ಆಡಳಿತ ಕಾಲದಲ್ಲಿ ಅಂತಹ ಘಟನೆ ಆಗಲು ಸಾಧ್ಯವೇ ಇಲ್ಲ. ಶಾಸನದಲ್ಲಿ ಮುತ್ತು, ಹವಳ, ಇತ್ಯಾದಿಗಳನ್ನು ದೇವಾಲಯಕ್ಕೆ ದತ್ತಿಯಾಗಿ ಕೊಟ್ಟ ವಿಷಯವಿದೆ. ಅಲ್ಲಿನ ಐಶ್ವರ್ಯವನ್ನು ಮುಸ್ಲಿಮರು ಲೂಟಿ ಮಾಡಿರುವ ಸಾಧ್ಯತೆ ಇದೆ.

(2) ಅದೇ ಶ್ರೀರಂಗಪಟ್ಟಣದ 47ನೇ ಪರ್ಷಿಯನ್ ಶಾಸನವು ಕೋಟೆಯ ಪ್ರವೇಶ ದ್ವಾರದ ಮಸೀದಿಯ ಗೋಡೆಯಲ್ಲಿದೆ. ಇಂದಿಗೂ ಅದರ ಕೆಳಭಾಗದಲ್ಲಿ ಸ್ಪಷ್ಟವಾಗಿ ಹಿಂದೂ ದೇವಾಲಯದ (ಆಂಜನೇಯ) ಕುರುಹುಗಳಿವೆ (–ಚಿತ್ರ ನೋಡಿ). ಮುಸ್ಲಿಮರು ಮುಸ್ಲಿಮರನ್ನೇ ಅವಲಂಬಿಸುತ್ತಾರೆ, ಕಾಫಿರರು ಕಾಫಿರರನ್ನೇ ಅವಲಂಬಿಸುತ್ತಾರೆ. (ಎಂದರೆ ಅವರವರು ಪರಸ್ಪರ ಸಹಾಯ ಮಾಡುತ್ತಾರೆ) "ಆದ್ದರಿಂದ ಪ್ರವಾದಿಯು ಮಾಡಿದಂತೆ ಕಾಫಿರರ ಜೊತೆ ಯುದ್ಧ ಮಾಡಲು ಸಿದ್ಧವಾಗು"– ಎಂದರೆ ಮುಸ್ಲಿಮರಿಗೆ ಕಾಫಿರರು ಶತ್ರುಗಳಾದ್ದರಿಂದ ಅವರನ್ನು ಸೋಲಿಸಲು ಸಕಲ ಸಿದ್ಧತೆ ಮಾಡಿಕೊಳ್ಳುವ ಮುಸ್ಲಿಮರಿಗೆ ಸಹಾಯ ಮಾಡಬೇಕು. "ಬವರತ್ ವಿಷಯದಲ್ಲಿ ಪ್ರವಾದಿ ಮಾಡಿದಂತೆ ಕಾಫಿರರನ್ನು ಸುಡು, ನೀರಿನಲ್ಲಿ ಮುಳುಗಿಸು, ಅವರ ಮರಗಳನ್ನು ಕಡಿದುಹಾಕು. ಅವರ ಹೊಲಗಳನ್ನು ಹಾಳು ಮಾಡು" ("Burn them as did the Prophet in the case of Bavarat, sink them in water, cut down their trees and destroy their fields".) ಹಾಗೆ ಮಾಡುವುದರಿಂದ ಅವರ ಒಗ್ಗಟ್ಟು ಒಡೆದು ಅವರು ಯುದ್ಧ ಮಾಡಲು ಸಿದ್ಧರಾಗುತ್ತಾರೆ. ಹೀಗೆ ಅವರ ಒಗ್ಗಟ್ಟನ್ನು ಒಡೆದು ಅವರನ್ನು ಕೊಲ್ಲುವುದು 'ಕಾನೂನಿಗೆ' ಎಂದರೆ ಕುರಾನಿನ ಆದೇಶಕ್ಕೆ ಅನುಗುಣ ಎಂದೇ ಶಾಸನ ಹೇಳುತ್ತದೆ. "ಸೋದರ ಮುಸ್ಲಿಮನನ್ನು ಪ್ರೀತಿಸುವವನು ಕಾಫಿರರ ವಿಷಯವನ್ನು ಇತರ ಎಲ್ಲರಿಗೂ ತಿಳಿಸುವುದು ಕಡ್ಡಾಯ". ಯುದ್ಧ ನಡೆಯುತ್ತಿರುವಾಗ ಯಾವುದೇ ಮುಸ್ಲಿಮನು ಕಾಫಿರರಿಗೆ ಸಹಾಯ ಮಾಡುವುದಾಗಲಿ, ಅವರ ಜೊತೆ ಸೇರಿ ಮುಸ್ಲಿಮರ ವಿರುದ್ಧ ಯುದ್ಧ ಮಾಡುವುದಾಗಲಿ, ಕಾಫಿರರಿಗೆ ಹಣ ಆಯುಧ ನೀಡುವುದಾಗಲಿ ತಪ್ಪು. ಆದರೆ ಕಾಫಿರರು ತನ್ನ ಇಸ್ಲಾಂ ಮತಕ್ಕೆ ಸೇರುವ ಅಭೀಪ್ಸೆ ವ್ಯಕ್ತ ಪಡಿಸಿದರೆ ಅವರಿಗೆ ಧನ, ಆಯುಧ ಸಹಾಯಮಾಡಬಹುದು. ಆದರೆ ಹಾಗೆ ಅಭೀಪ್ಸೆ ವ್ಯಕ್ತ ಪಡಿಸದೆ ಇದ್ದಾಗ ಸಹಾಯ ಮಾಡಿದರೆ ಅಂತಹ ಮುಸ್ಲಿಮರನ್ನು ಸೆರೆಮನೆಗೆ ಹಾಕಿ ಶಿಕ್ಷಿಸಬೇಕು.

ಮೇಲಿನದು ಮಸೀದಿಯ 'ಶಾಸನ' – ಆಜ್ಞೆ, ಆದೇಶ, ಮುಹಮ್ಮದನ ಕಟ್ಟಪ್ಪಣೆ: ಎಲ್ಲ ಕಾಫಿರರನ್ನು ಕೊಲ್ಲು ಎಂಬ ಆದೇಶದ ನಿಷ್ಠಾವಂತ ಪರಿಪಾಲಕ ಟಿಪ್ಪು.

ಆ ಕಾರಣದಿಂದಲೇ ಅವನು ಆಂಜನೇಯ ದೇವಸ್ಥಾನ ಕೆಡವಿ ಮಸೀದಿ ಕಟ್ಟಿಸಿರುವುದು. ಅದೇ ಮಸೀದಿಯ 48ನೇ ಶಾಸನವು ಹೇಳುತ್ತದೆ. "ಈ ಮಸೀದಿಯು ಭದ್ರ ಪ್ರಾರ್ಥನಾ ಮಂದಿರವೆಂಬ ದಿವ್ಯಲೋಕದ ವಾಣಿಯು ಟಿಪ್ಪುವಿಗೆ ಕೇಳಿಸಿತು". ಅದು ಅಲ್ಲಾನ ಆಜ್ಞೆ.

ಅದೇ ಮಸೀದಿಯ ದಕ್ಷಿಣ ಗೋಡೆಯ ಮೇಲಿನ ಶಾಸನ (ಸಂಖ್ಯೆ 15) ಗಮನಾರ್ಹವಾದುದು. "ಅಲ್ಲಾನು ಹೀಗೆ ಹೇಳಿದ್ದಾನೆ – ಯಾರು ಯಾರು ತಮ್ಮ ತಮ್ಮ ಗ್ರಂಥವನ್ನು ಓದಿಕೊಂಡು ದುಷ್ಟರ ಕೂಟಕ್ಕೆ ಸಹಾಯ ಮಾಡಿರುವರೋ (ಕಾಫಿರರು) ಅವರು ತಮ್ಮ ಕೋಟೆಗಳಿಂದ ಹೊರಬರುವಂತೆ ಮಾಡಿ ಅವರ ಹೃದಯಗಳಲ್ಲಿ ಭಯಭೀತಿಗಳನ್ನು ಅವನು (ಅಲ್ಲಾನು) ಮೂಡಿಸಿದ; ಅವರಲ್ಲಿ ಕೆಲವರ ಚರ್ಮ ಸುಲಿದು ಕೆಲವರನ್ನು ಬಂಧನದಲ್ಲಿಟ್ಟ. ಅಲ್ಲಾ ನಿನಗೆ (ಮುಸ್ಲಿಮನಿಗೆ) ಅವರ ಭೂಮಿ ಮನೆಗಳನ್ನು ಕೊಡಿಸಿದ. ಮುಸ್ಲಿಮನು ಓಡಾಡಿದ ಭೂಮಿಯನ್ನೆಲ್ಲ ನೀಡಿದ. ಏಕೆಂದರೆ ಅಲ್ಲಾನೇ ಸರ್ವಶಕ್ತ". ಬಂಧಿತರಾದವರಲ್ಲಿ ಗಂಡಸರನ್ನು ಖಡ್ಗಕ್ಕೆ ಆಹುತಿ ಮಾಡಿ ಅವರ ಹೆಂಡಿರು ಮಕ್ಕಳನ್ನು ದಾಸರನ್ನಾಗಿ ಮಾಡಿಕೊಂಡು ಅವರ ಆಸ್ತಿಯನ್ನೆಲ್ಲ ಮುಸ್ಲಿಮರಿಗೆ ಹಂಚಬೇಕು. (The males should be put to the sword, the women and children made slaves and their goods should be divided among the Muslims) ಹಳೆಯ ಟೆಸ್ಟಮೆಂಟ್ ಓದಿದವರೇ ಯಹೂದ್ಯರು. ಅಲ್ಲಾನು ಅವರ ಹೃದಯದಲ್ಲಿ ಭಯವನ್ನು ಬಿತ್ತಿ ಏಳುನೂರಕ್ಕಿಂತ ಹೆಚ್ಚು ಯಹೂದ್ಯರನ್ನು, ಅವರ ಹೆಂಡಿರು ಮಕ್ಕಳನ್ನು ಗುಲಾಮರನ್ನಾಗಿ ಮಾಡಿದ. ಈ ದೈವವಾಣಿ ಟರ್ಕಿ, ಪರ್ಷಿಯಗಳಿಗೆ ಅನ್ವಯವಾದರೂ ಮುಸ್ಲಿಮರಿರುವ ಎಲ್ಲ ದೇಶಗಳಿಗೂ ಅನ್ವಯವಾಗುತ್ತದೆ". ಇದು ಆ ಶಾಸನದ ಸಾರಾಂಶ. ಹಿಂದೆಯೇ ಅಲ್ಲಾನ ಆಜ್ಞೆಯಂತೆ ಯಹೂದ್ಯರನ್ನು ಕೊಂದಿರುವುದರಿಂದ ತನ್ನ ಪವಿತ್ರ ಕರ್ತವ್ಯವೂ ಎಲ್ಲ ಕಾಫಿರರನ್ನು ಕೊಲ್ಲುವುದೇ ಆಗಿದೆ ಎಂದು ಟಿಪ್ಪುವಿನ ಶಾಸನ ಸೂಚಿಸುತ್ತದೆ; ಅಥವಾ ಟಿಪ್ಪುವೇ ಸೂಚಿಸುತ್ತಾನೆ.

ಅದೇ ಶ್ರೀರಂಗಪಟ್ಟಣದ ಗುಂಬಜ್ ಶಾಸನವು ಟಿಪ್ಪುವಿನ ಸಾವನ್ನು (ಕ್ರಿ.ಶ. 1799) ಹೇಳುತ್ತದೆ. "ಟಿಪ್ಪು ಅಲ್ಲಾನ ದಾರಿಯಲ್ಲಿ ತನ್ನ ರಕ್ತವನ್ನು ಚೆಲ್ಲಿ ಹುತಾತ್ಮನಾಗಿ ಉರುಳಿದ" (Tippu Sultan fell a martyr suddenly shedding his blood in the path of God). "ಇಸ್ಲಾಮಿನ ಮತ್ತು ಅದರ ಶ್ರದ್ಧೆಯ ದೀಪ ಆರಿತು." (The light of Islam and the faith departed this world). "ಟೀಪು ಮಹಮ್ಮದನ ಧರ್ಮಕ್ಕಾಗಿ ಹುತಾತ್ಮನಾದ" (Tippu fell a martyr for the religion of Muhammad). "ಧರ್ಮದ ರಕ್ಷಕ ಮತ್ತು ಯುಗದ ದೊರೆ ಕಣ್ಮರೆಯಾದ". (The defender of the Faith and King of the age departed") ಈ ಶಾಸನವು ಟಿಪ್ಪು ಬದುಕಿದ್ದು, ಸತ್ತಿದ್ದೂ ಇಸ್ಲಾಮಿಗಾಗಿ ಎಂಬುದನ್ನು ನೇರವಾಗಿ ಸೂಚಿಸುತ್ತದೆ. ಅವನು ಜೀವನದುದ್ದಕ್ಕೂ, ಮತ್ತು ಬ್ರಿಟಿಷರೊಡನೆ ಹೋರಾಡಿದ್ದು



ತನ್ನ ಪ್ರಜೆಗಳ ಯೋಗಕ್ಷೇಮಕ್ಕಲ್ಲ, ತನ್ನ ಇಸ್ಲಾಮಿನ ಪ್ರಚಾರಕ್ಕಾಗಿ. ಇದರ ಅರ್ಥ – ಅವನಿಗೆ ತನ್ನ ಇಸ್ಲಾಂ ಮುಖ್ಯವಾಗಿತ್ತೇ ಹೊರತು ಪ್ರಜೆಗಳ ಯೋಗಕ್ಷೇಮ ಅಲ್ಲ. ಆ ಪ್ರದೇಶದಲ್ಲಿರುವ ಎಲ್ಲ ಮುಸ್ಲಿಮರ ಗೋರಿ ಮೇಲಿನ ಶಾಸನಗಳೂ ಪರ್ಷಿಯನ್ ಭಾಷೆಯಲ್ಲಿವೆ ಎಂಬುದೂ ಗಮನಿಸಬೇಕಾದ್ದು.

## ಇತರ ಶಾಸನಗಳು

ಮಂಡ್ಯ ಜಿಲ್ಲೆಯ ಕ್ರಿ.ಶ. 1798ರ ಪರ್ಷಿಯನ್ ಶಾಸನವು 1798ರಲ್ಲಿ ಟಿಪ್ಪು ಕಾವೇರಿಗೆ ಆಣೆಕಟ್ಟು ಕಟ್ಟಿಸಿದ ವಿಷಯವನ್ನು ದಾಖಲಿಸಿದೆ. (ಕರ್ನಾಟಕದ ಅರೇಬಿಕ್ ಮತ್ತು ಉರ್ದುಶಾಸನಗಳು 2001. ಸಂಖ್ಯೆ 307). ಅವನಿಗಿಂತ ಮೊದಲೇ ಕನ್ನಂಬಾಡಿ ಕಟ್ಟೆಯನ್ನು ಚಿಕ್ಕದೇವರಾಜ ಒಡೆಯರು ಕಟ್ಟಿಸಿದ್ದರು ಎಂಬುದಕ್ಕೆ ಸೂಚನೆಗಳಿವೆ. (ಮ. ನರಸಿಂಹಮೂರ್ತಿ : 'ಕನ್ನಂಬಾಡಿ ಕಟ್ಟೆ ಚಿಕ್ಕದೇವರಾಜ ಒಡೆಯರಿಂದ'. ಚಿಕ್ಕದೇವರಾಜ ಒಡೆಯರ ಆಡಳಿತ ಕಾಲ ಕ್ರಿ.ಶ. 1672–1704. ಕ್ರಿ.ಶ. 1701ರಲ್ಲಿ ಮೈಸೂರು ರಾಜ್ಯಕ್ಕೆ ಬಂದಿದ್ದ ಫಾದರ್ ಮಾರ್ಟಿನ್ ಎಂಬ ಪಾದ್ರಿ ಫಾದರ್ ಡೆವಿಲೆಟ್ ಎಂಬ ಇನ್ನೊಬ್ಬ ಪಾದ್ರಿಗೆ ಬರೆದ ಕಾಗದ ಇದು – "ಅಂತೂ ಮಳೆಯೇನೋ ಸಕಾಲದಲ್ಲಿ ಬಂದಿತ್ತು. ಬೆಟ್ಟಗಳಿಂದ ನುಗ್ಗಿಬರುವ ನೀರು ಎಂದಿಗಿಂತ ಮುಂಚಿತವಾಗಿಯೇ (ಕಾವೇರಿಯ ಮೂಲಕ) ಕೆಳಗಿನ ಪ್ರದೇಶಕ್ಕೆ ಬರುವುದಾಗಿತ್ತು. ಆದರೆ ಅದು ಇಲ್ಲಿಗೆ ಹರಿದು ಬರಂದಂತೆ ಮೈಸೂರು ದೊರೆ ಬಹು ಎತ್ತರವಾದ ಕಟ್ಟೆಯನ್ನು ಆ ನದಿ (ಕಾವೇರಿ)ಯ ಅಡ್ಡಕ್ಕೆ ಪೂರ್ತಿಯಾಗಿ ಹಾಕಿಸಿ ಅದನ್ನು ತಡೆದು ಬಿಟ್ಟಿದ್ದಾನೆ. ನದಿಯ ದಡದಲ್ಲಿ, ತಾನು ತೆಗೆಸಿರುವ ಕಾಲುವೆಗಳಲ್ಲಿ ಈ ನೀರು ಹರಿದು ತನ್ನ ರಾಜ್ಯಕ್ಕೆ ಉಪಯೋಗವಾಗಲೆಂದು ಆತನ ಏರ್ಪಾಡು. ಹೀಗೆ ತನ್ನ ಜಮೀನು ಫಲವತ್ತಾಗಿ ಅದರಿಂದ ತನ್ನ ವರಮಾನ ಹೆಚ್ಚಾಗಬೇಕೆಂದು ಈತನು ನಡೆಸಿದ ಕೆಲಸದಿಂದ ಪಕ್ಕದ ರಾಜ್ಯಗಳಾದ ಮಧುರೆ, ತಂಜಾವೂರುಗಳು ಹಾಳಾಗುವುದಕ್ಕೆ ಅವಕಾಶವಾಯಿತು......"

ಎಂದರೆ ಟಿಪ್ಪು ಆಗಲೇ ಹಿಂದೆ ಕಟ್ಟಿದ್ದ ಕನ್ನಂಬಾಡಿ ಕಟ್ಟೆಯನ್ನು ಜೀರ್ಣೋದ್ಧಾರ ಮಾಡಿದ. ಅವನೇ ಕನ್ನಂಬಾಡಿ ಕಟ್ಟೆ ಕಟ್ಟಿದ ಮೊದಲಿಗ ಖಂಡಿತ ಅಲ್ಲ. ಟಿಪ್ಪು ಬಗ್ಗೆ ಇರುವ ಭ್ರಮೆಯನ್ನು ನಾವು ಕೈಬಿಡಲೇಬೇಕು.

❋ ❋ ❋ ❋

## 7. ಟಿಪ್ಪು ಬಗ್ಗೆ ಕೃತಿ–ಟಿಪ್ಪು ಮಗ ಪರಿಷ್ಕರಿಸಿದ್ದು (1855)

ಎಂ.ಎಂ.ಡಿ.ಎಲ್.ಟಿ. ಎಂಬಾತ (ಮೈಸ್ತ ದಿ ಲ ತೂರ್) ಎಂಬ ಫ್ರೆಂಚ್ ವ್ಯಕ್ತಿ ತನ್ನನ್ನು "General in the army of Mogul Empire". ಎಂದು ಕರೆದುಕೊಂಡಿದ್ದಾನೆ. ಅವನು ಹೈದರಾಲಿಯ ಕಾಲದಲ್ಲಿ ದೆಹಲಿಯಿಂದ ಆಳುತ್ತಿದ್ದ ಮುಘಲ್ ವಂಶದ ನವಾಬರ ಸೇನೆಯ ಮುಖ್ಯಸ್ಥನಾಗಿದ್ದ. ಫ್ರೆಂಚರಿಗೂ ಹೈದರ್ – ಟಿಪ್ಪು ಇವರಿಗೂ ಸ್ನೇಹ ಸಂಬಂಧವಿದ್ದುದರಿಂದ ಮುಂದೆ ಅವನು ಹೈದರಾಲಿಯ ತೋಪುಖಾನೆಯ ಅಧಿಕಾರಿಯಾಗಿ ನೇಮಕ ಗೊಂಡ. (ತೋಪುಖಾನೆ – ಫಿರಂಗಿಗಳ ಕೋಣೆ); ಮತ್ತು ಆಗಿನಿಂದ ಸಮಕಾಲೀನ ಹೈದರನ ವೃತ್ತಾಂತ ಬರೆಯಲಾರಂಭಿಸಿದ. 1782ರಲ್ಲಿ ಹೈದರ್‌ನು ತೀರಿಕೊಂಡ ಮೇಲೆ ಅವನ ವೃತ್ತಾಂತವನ್ನು ಅವನು ನವಾಬನ ಅಂತ್ಯದವರೆಗೆ 1783ರಲ್ಲಿ ಮೊದಲ ಭಾಗದ ಚರಿತ್ರೆಯನ್ನು ಫ್ರೆಂಚ್ ಭಾಷೆಯಲ್ಲಿ ಪ್ರಕಟಿಸಿದ. ಮುಂದೆ ಎರಡು ಭಾಗದ ಚರಿತ್ರೆಯನ್ನು (ಹೈದರ್ ಮತ್ತು ಟಿಪ್ಪು) ಇಂಗ್ಲಿಷ್‌ನಲ್ಲಿ ಬರೆದ. ಬರೆದು ಮುಗಿಸಿದ್ದು ಟಿಪ್ಪು ಬದುಕಿದ್ದಾಗಲೇ. ಮುಂದೆ ಅದನ್ನು ಟಿಪ್ಪುವಿನ ಸಾವಿನ ಬಳಿಕ ಟಿಪ್ಪುವಿನ ಕೊನೆಯ ಮಗ (His Highness Prince Gholam Mohammed) ಇಂಗ್ಲಿಷ್ ಕೃತಿಯನ್ನು ಪರಿಷ್ಕರಿಸಿ ತಿದ್ದಿಕೊಟ್ಟ. ಗೊಲಾಂ ಮೊಹಮ್ಮದನ ಹೆಸರು The only surviving son of Tippu Sultan ಎಂದೇ ಮುಖಪುಟದಲ್ಲಿ ಅಚ್ಚಾಗಿದೆ (ಕೃತಿಯ ಕರ್ತೃತ್ವದ ಬಗ್ಗೆ ಲೇಖನದ ಕೊನೆ ನೋಡಿ)

ಅದರಲ್ಲಿನ ಮಾಹಿತಿಯ ಸಾರಾಂಶ ಇದು – "ಟಿಪ್ಪುವು ಮಲಬಾರ್ ಪ್ರದೇಶವನ್ನು ಲೂಟಿ ಮಾಡಿ ಗೆದ್ದು ಅಲ್ಲಿದ್ದ ಎಪ್ಪತ್ತುಸಾವಿರ (70,000) ಕ್ರಿಶ್ಚಿಯನ್ನರನ್ನು ಒಂದು ಲಕ್ಷ (1,00,000) ಹಿಂದೂಗಳನ್ನು ಬಲಾತ್ಕಾರದಿಂದ ಮತಾಂತರಿಸಿದ. ಕ್ರಿಶ್ಚಿಯನ್ನರನ್ನು ಮತಾಂತರಿಸುವುದು ಅಷ್ಟು ಕಷ್ಟವಾಗಲಿಲ್ಲ. ಆದರೆ ಹಿಂದುಗಳು ತಮ್ಮ ಧರ್ಮಕ್ಕೆ ಬಲವಾಗಿ ಅಂಟಿಕೊಂಡದ್ದರಿಂದ ಅವರ ಶಿಶ್ನಚ್ಛೇದ ಮಾಡಿಸಿ ಗೋಮಾಂಸ ತಿನ್ನಿಸಿ ಅವರನ್ನು ಮುಸ್ಲಿಮರನ್ನಾಗಿ ಮಾಡಿದ. ಅವರೆಲ್ಲರಿಗೂ ಮುಸ್ಲಿಂ ಶಿಕ್ಷಣವನ್ನು ನೀಡಿದ. ಟಿಪ್ಪುವಿನ ಉತ್ಸಾಹ ಬರೀ ಮಲಬಾರಿಗೆ ಸೀಮಿತವಾಗಿರಲಿಲ್ಲ. ಕೊಯಮತ್ತೂರಿನ ನಿವಾಸಿಗಳನ್ನೂ ತನ್ನ ಅಪ್ರೀತಿಗೆ ಪಾತ್ರರಾದ ಎಲ್ಲರನ್ನೂ ಮತಾಂತರಿಸಿದ. ತನ್ನ ತಾಯಿಯು ಬುದ್ಧಿವಾದ ಹೇಳದಿದ್ದರೆ ಅವನು ತನ್ನ ದಿವಾನ್ ಪೂರ್ಣಯ್ಯನವರನ್ನೂ ಮತಾಂತರಗೊಳ್ಳಲು ಬಲಾತ್ಕರಿಸುತ್ತಿದ್ದ. ಅವನು ಆದೇಶವನ್ನು ಹೊರಡಿಸಿ ಶ್ರೀರಂಗಪಟ್ಟಣ ಮತ್ತು ಮೇಲ್ಕೋಟೆಗಳನ್ನು ಹೊರತು ಪಡಿಸಿ ಉಳಿದ ಎಲ್ಲ ಕಡೆಯ ಹಿಂದೂ ದೇವಾಲಯಗಳನ್ನು ನಾಶಪಡಿಸಲು ಆಜ್ಞೆ ಮಾಡಿದ. ಅವನು ಹೆಂಡ ಮಾರುವುದನ್ನು ನಿಲ್ಲಿಸಿದ. ಇದರಿಂದ ಅವನ ಆದಾಯ ಬಹಳ ಕಡಿಮೆ ಆಯ್ತು. ಆದರೂ ಅವನ ಈ ಆದೇಶವನ್ನು ಅವನ ಅಧಿಕಾರಿಗಳು ಸಂಪೂರ್ಣವಾಗಿ ಪಾಲಿಸಲಿಲ್ಲ. ತನ್ನ ಆಡಳಿತಕ್ಕಿಂತ ಹಿಂದೆ ಇದ್ದ ದೊರೆಗಳ ಎಲ್ಲ ಸ್ಮಾರಕಗಳನ್ನೂ ಧ್ವಂಸಗೊಳಿಸಿದ. ಮೈಸೂರಿನ ಕೋಟೆ, ಹಿಂದೂ



ದೇವಾಲಯಗಳನ್ನು ಕೆಡವಿಸಿ ಅವುಗಳ ಕಲ್ಲುಗಳಿಂದ ಮೈಸೂರಿನ ಸಮೀಪದ ಚಿಕ್ಕ ದಿಬ್ಬದ ಮೇಲೆ ಕೋಟೆ ಕಟ್ಟಿಸಿ ಅದಕ್ಕೆ 'ನಜರಾಬಾದ್' ಎಂದು ಹೆಸರಿಡಿಸಿದ. ಅವನು ಹಿಂದಿನ ರಾಜರು ಕಟ್ಟಿಸಿದ್ದ Yadavi Nuddi ಎಂಬ ಜಲಾಶಯವನ್ನು, ಅದರಿಂದ ರೈತರಿಗೆ ಬಹಳ ಅನುಕೂಲಗಳಿದ್ದರೂ ಮೈಸೂರು ದೊರೆಗಳು ಕಟ್ಟಿಸಿದ್ದು ಎಂಬ ಕಾರಣಕ್ಕೆ ನಾಶಪಡಿಸಿದ ....." (ಪ್ರ. 279–80). ಅವನು ಭಗ್ನ ಮಾಡಿದ "Yadavi Nuddi" ಎಂಬ ಜಲಾಶಯ ಯಾವುದೋ ತಿಳಿಯದು – ಅದು ಇಂದಿನ ಮೈಸೂರು ಅರಮನೆ ಸಮೀಪದ ಯಾವುದೋ ಕೆರೆ ಇರಬೇಕು. ಅವನು ಕನ್ನಂಬಾಡಿ ಕಟ್ಟೆಯನ್ನು ಕಟ್ಟಿಸಿದ್ದು ಅವನೇ ಬರೆಯಿಸಿರುವ ಶಾಸನದಿಂದ ಸೂಚಿತವಾಗಿದ್ದರೂ ಅದು ಅವನಿಗಿಂತ ಹಿಂದಿನ ಚಿಕ್ಕದೇವರಾಜ ಒಡೆಯರು ಮೂಲತಃ ಚಿಕ್ಕ ಪ್ರಮಾಣದಲ್ಲಿ ಕಟ್ಟಿಸಿದ್ದು ಎಂಬುದಕ್ಕೆ ದಾಖಲೆಗಳಿವೆ. (ಟಿಪ್ಪು ತನಗಿಂತ ಹಿಂದಿನ ರಾಜರು ಮಾಡಿದ ಒಳ್ಳೆಯ ಕೆಲಸಗಳನ್ನು ಸಹಿಸದೆ ಭಗ್ನಗೊಳಿಸಿದ ಎಂದು ಟಿಪ್ಪು ಮಗ ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ). ಒಂದು ಐತಿಹ್ಯದ ಪ್ರಕಾರ, ಪೂರ್ಣಯ್ಯನವರ ಮಗಳು ಕಾವೇರಿಯಲ್ಲಿ ಸ್ನಾನ ಮಾಡುತ್ತಿರುವಾಗ ಒಬ್ಬ ಮುಸ್ಲಿಂ ಅಧಿಕಾರಿ ಅವಳನ್ನು ಅಪಮಾನ ಪಡಿಸಿದ. ಅದು ಪೂರ್ಣಯ್ಯನವರಿಂದ ತಿಳಿದಾಗ ಟಿಪ್ಪು ಹೇಳಿದ ಮಾತು – "ಕತ್ತೆಯು ತಿಂದ ಎಂಜಲಿನ ಮಡಕೆಯನ್ನು ಕತ್ತೆಗೇ ಬಿಟ್ಟುಕೊಡಿ". ಪೂರ್ಣಯ್ಯನವರನ್ನು ಮತಾಂತರಗೊಳಿಸಲು ಯತ್ನಿಸಿದ ಎಂಬ ಮೇಲಿನ ದಾಖಲೆಯನ್ನು ಈ ಐತಿಹ್ಯವು ಸಮರ್ಥಿಸುತ್ತದೆ.

ಫ್ರೆಂಚನೊಬ್ಬ ಬರೆದು ಟಿಪ್ಪು ಮಗ ಪರಿಷ್ಕರಿಸಿರುವ ಕೃತಿಯ ಮಾಹಿತಿಯೆಲ್ಲವೂ ಅಪ್ಪಟ ಐತಿಹಾಸಿಕ ಸತ್ಯ. ಟಿಪ್ಪು ತನ್ನ ಶ್ರೀರಂಗಪಟ್ಟಣ ಕೋಟೆ ಪ್ರವೇಶದ್ವಾರದ ಆಂಜನೇಯ ಗುಡಿ ದೇವಾಲಯವನ್ನು ಕೆಡವಿಸಿ ನಿರ್ಮಿಸಿದ ಮಸೀದಿಯ ಶಾಸನ ಮತ್ತು ಶ್ರೀರಂಗಪಟ್ಟಣದ ಹಲವು ಪರ್ಷಿಯನ್ ಶಾಸನಗಳಲ್ಲಿ "ಕಾಫಿರರನ್ನು ಕೊಲ್ಲಬೇಕು" ಎಂಬರ್ಥದ ಮಾತುಗಳಿವೆ. ಅವನು ಕಿತ್ತು ಹಾಕಿಸಿದ ಆಂಜನೇಯನ ವಿಗ್ರಹವನ್ನು ಊರ ಒಳಗೆ ಹೊಸ ದೇವಾಲಯ ಕಟ್ಟಿಸಿ ಅಲ್ಲಿ ಪ್ರತಿಷ್ಠಾಪನೆ ಮಾಡಲಾಗಿದೆ. ಅವನು ಕಟ್ಟಿಸಿದ ಮಸೀದಿಯ ಕೆಳಭಾಗದಲ್ಲಿ ಇಂದಿಗೂ ಹಿಂದೂ ದೇವಾಲಯದ ಕುರುಹುಗಳು ಸ್ಪಷ್ಟವಾಗಿವೆ. (ಚಿತ್ರ ನೋಡಿ) ಅಲ್ಲಿನ ಸಂಗೀನ್ ಮಸೀದಿಯ ಪಕ್ಕದ ಶಾಸನವನ್ನು ನೋಡಿದರೆ ಅದು ಶ್ರೀ ವೈಷ್ಣವ ಸಂಪ್ರದಾಯಕ್ಕೆ ಸೇರಿದ ಭಕ್ತರು ನೀಡಿದ ದಾನಶಾಸನವಾಗಿದೆ – ಶ್ರೀ ವೈಷ್ಣವ ಸಂಪ್ರದಾಯದ ವಿಷ್ಣು ದೇವಾಲಯವನ್ನು ಕೆಡವಿಸಿ ಸಂಗೀನ್ ಮಸೀದಿಯನ್ನು ಟಿಪ್ಪು ಕಟ್ಟಿಸಿದ ಎಂಬುದರ ಸ್ಪಷ್ಟ ಸೂಚನೆ ಅದು. ಅಂದಿನಿಂದ ಇಂದಿನವರೆಗೂ "ಮಂಡ್ಯ ಅಯ್ಯಂಗಾರ್" ಎಂದು ಕರೆದುಕೊಳ್ಳುವ ಜನರು ದೀಪಾವಳಿ ನರಕ ಚತುರ್ದಶಿಗಳನ್ನು ದುಃಖದ ದಿನವಾಗಿ (ಕಷ್ಟ ದಿನವಾಗಿ) ಭಾವಿಸಿ ಆ ದಿನ ಅವರು ದೀಪಾವಳಿ ಹಬ್ಬವನ್ನು ಆಚರಿಸುವುದಿಲ್ಲ. ಆ ವರ್ಗಕ್ಕೆ ಸೇರಿದ ಒಬ್ಬ ಮಂಡ್ಯ ಅಯ್ಯಂಗಾರ್ ನನಗೆ ಪತ್ರ ಬರೆದು ತಿಳಿಸಿರುವಂತೆ ಟಿಪ್ಪು ತನ್ನ ಕಾಲದ ಎಂಟುನೂರು ಮಂಡ್ಯಂ ಅಯ್ಯಂಗಾರ್ ಕುಟುಂಬಗಳ ಬ್ರಾಹ್ಮಣರನ್ನು ಅವರು ಮುಸ್ಲಿಮರಾಗಲು ಒಪ್ಪದೇ ಇದ್ದುದರಿಂದ ದೀಪಾವಳಿ ಹಬ್ಬದ ದಿನ ನಿರ್ದಯವಾಗಿ ಕೊಲ್ಲಿಸಿದ. ಆ ಕರಾಳ ದಿನವನ್ನು ಅವರು ಇಂದಿಗೂ ಮರೆತಿಲ್ಲ.

ಟಿಪ್ಪುವಿನ ಖಡ್ಗದ ಮೇಲಿನ ಶಾಸನವು ಎಲ್ಲ ಕಾಫಿರರನ್ನು ಕೊಲ್ಲಬೇಕು ಎಂದೇ ಹೇಳುತ್ತದೆ (My victorious sabre is lightning to kill all Kafirs) ಅವನು ಕಲ್ಲಿಕೋಟೆಯ ತನ್ನ ಸೇನಾಧಿಪತಿಗಳಿಗೆ ಬರೆದ ಪತ್ರಗಳು ಲಂಡನ್ನಿನಲ್ಲಿದ್ದು ಅವು ಈಗಾಗಲೇ ಮಲಯಾಳ, ಇಂಗ್ಲಿಷ್, ಕನ್ನಡ ಭಾಷೆಗಳಿಗೆ ಅನುವಾದಗೊಂಡಿವೆ. 14–12–1788ರ ಪತ್ರ – "ನೀನು ಆತನ ಜೊತೆಗೂಡಿ ದೈವದಲ್ಲಿ ನಂಬಿಕೆಯಿಲ್ಲದ ಎಲ್ಲಾ ಕಾಫೀರರನ್ನು ಕೊಲ್ಲಬೇಕು."22–3–1789ರಲ್ಲಿ ಕೊಡೆಂಗೇರಿ ಅಬ್ದುಲ್ ಖಾದಿಗೆ ಬರೆದ ಪತ್ರ – "ನಾನು 12000 ಕಾಫಿರರನ್ನು ಮತಾಂತರಿಸಿದ್ದೇನೆ. ನೀನು ನಂಬೂದರಿ (ಬ್ರಾಹ್ಮಣ) ಮತ್ತು ಇತರರನ್ನು ಮತಾಂತರಿಸು.". 18.1.1790 ಸೈಯದ್ ಅಬ್ಬುಲ್ ಮಲ್ ಮಲಕ್ ಗೆ ಬರೆದ ಪತ್ರ. "ಪ್ರವಾದಿ ಮಹಮ್ಮದರ ಕೃಪೆ ಮತ್ತು ಅಲ್ಲಾಹನ ದಯೆಯಿಂದ ನಾವು ಕಲ್ಲಿಕೋಟೆಯ 75% ನಾಸ್ತಿಕರನ್ನು ಮತಾಂತರಿಸಿದ್ದೇವೆ". 19–1–1790ರ ಪತ್ರ: "ನಾನು ಸುಮಾರು ನಾಲ್ಕು ಲಕ್ಷ ಜನರನ್ನು ಇಸ್ಲಾಮಿಗೆ ಮತಾಂತರಿಸಿದ್ದೇನೆ". ಟಿಪ್ಪು ನಡೆಸಿದ ಮತಾಂತರ, ನರಮೇಧ. ಶ್ರೀರಂಗಪಟ್ಟಣದ ಪ್ರದೇಶಕ್ಕಿಂತ ಕೊಡಗು, ಮಲಬಾರ್ ನಲ್ಲಿ ಹೆಚ್ಚು – ಕಾರಣ ಸ್ಪಷ್ಟ. ಕಾಸರಗೋಡು ಸಮೀಪದ ಮದೂರ್ ಎಂಬ ಊರಿನ ಗಣೇಶ ದೇವಾಲಯದ ಹೊರಭಾಗದಲ್ಲಿ "ಟಿಪ್ಪು ಖಡ್ಗದ ಚಿಹ್ನೆ ಇರುವ ಜಾಗ" ಎಂಬ ಕನ್ನಡ, ಮಲಯಾಳ, ಇಂಗ್ಲಿಷ್ ನಾಮಫಲಕವಿದೆ. ಅವನು ಹಲವು ದೇವಾಲಯಗಳನ್ನು ನಾಶಮಾಡುತ್ತ ಬಂದವನು ಆ ದೇವಸ್ಥಾನದ ಹೊರಗೆ ಸಾಂಕೇತಿಕವಾಗಿ ಖಡ್ಗದಿಂದ ಹೊಡೆದ ಎಂಬ ಮಾಹಿತಿ ದೊರಕುತ್ತದೆ. ಮೆನನ್‌ರ ಕೇರಳದ ಚರಿತ್ರೆ ಪ್ರಕಾರ ಟಿಪ್ಪುವಿನ ಪ್ರಜೆಗಳ ಮುಂದೆ ಇದ್ದ ಆಯ್ಕೆ ಎರಡು – ಕುರಾನ್ ಮತ್ತು ಖಡ್ಗ.

ಟಿಪ್ಪು ಮಗ ತನ್ನ ಚರಿತ್ರೆಯಲ್ಲಿ ಟಿಪ್ಪುವಿನ ಬಗ್ಗೆ ಅಭಿಮಾನದಿಂದಲೇ ಮಾತನಾಡಿರುವುದು ಸಹಜ – ಟಿಪ್ಪು ಅಧಿಕಾರದಲ್ಲಿದ್ದಾಗ ಅಂತಹ ಮಾತುಗಳನ್ನು ಬರೆಯುವುದು, ಅದರಲ್ಲೂ ಅವನ ಮಗ ಹಾಗೆ ಬರೆದಿರುವುದು ಸ್ವಾಭಾವಿಕ. ಯಾವುದೇ ದೃಷ್ಟಿಯಿಂದ ನೋಡಿದರೂ ಈಗಿನ ಆಂಧ್ರದ ಶಾಸಕ ಅಕ್ಬರುದ್ದೀನ್ ಒವೈಸಿಯ ಕನಸನ್ನು ಇನ್ನೂರು ವರ್ಷಗಳ ಹಿಂದೆಯೇ ನನಸು ಮಾಡಿದವನು ಟಿಪ್ಪು.

ಟಿಪ್ಪು ಪರ, ವಿರೋಧ ಅಭಿಪ್ರಾಯಗಳು ವ್ಯಕ್ತವಾಗಿವೆ. ಆದರೆ ಮೇಲಿನ ಸ್ಪಷ್ಟ ಮೂಲಭೂತ ಮಾಹಿತಿಯನ್ನು ಮೇಲ್ನೋಟಕ್ಕೆ ನೋಡಿದರೂ ಸಾಕು – ಅವನೊಬ್ಬ ದಯಾಹೀನ, ಮತಾಂಧ. ಐ.ಮಾ ಮುತ್ತಣ್ಣ, ಎಚ್.ಡಿ. ಶರ್ಮಾ ಪ್ರಕಾರ ಅವನ ಧ್ಯೇಯ ಇಡೀ ಭಾರತವನ್ನು ಇಸ್ಲಾಂಮಯವಾಗಿ ಮಾಡುವುದಿತ್ತು, ಈಗಿನ ಅಕ್ಬರುದ್ದೀನ್ ಓವೈಸಿಯಂತೆ. ಅವನನ್ನು ಕೆಲವು ಸಾಹಿತಿಗಳು ನಿಜವಾದ ಮಾಹಿತಿ ಅರಿಯದೆ ಸ್ವಾತಂತ್ರ್ಯ ಹೋರಾಟಗಾರ, ಸರ್ವಧರ್ಮ ಪ್ರೇಮಿ ಎಂದು ಹೊಗಳಿದ್ದಾರೆ. ಅವನ ಮಗನೇ ಹೇಳುವಂತೆ, ಜಾತಕದಲ್ಲಿ ನಂಬಿಕೆ ಇದ್ದ ಅವನು ತನ್ನ ಕಂಟಕ ನಿವಾರಣೆಗಾಗಿ ಹಣ ನೀಡಿ ಬ್ರಾಹ್ಮಣರಿಂದ ಯಜ್ಞ, ಯಾಗ ಮಾಡಿಸುತ್ತಿದ್ದ. ಅವನು ಶೃಂಗೇರಿ, ಮೇಲ್ಕೋಟೆ ಮಠ ದೇವಾಲಯಗಳಿಗೆ ದತ್ತಿ ನೀಡಿದ್ದರೆ ಅದರ ಉದ್ದೇಶವೇನು



ಎಂಬುದು ಸ್ವಯಂ ವೇದ್ಯ. ಅಂತಹ ಟಿಪ್ಪು ಹೆಸರಿನ ವಿಶ್ವವಿದ್ಯಾಲಯವನ್ನು ಬೆಂಬಲಿಸಬೇಕೆ? ಶ್ರೀರಂಗಪಟ್ಟಣ ಅಥವ ಇತರೆಡೆ ಅದು ಸ್ಥಾಪಿತವಾಗಲು ಅವಕಾಶ ನೀಡಬೇಕೇ? ಕೆಲವು ಸಾಹಿತಿಗಳು ಬೆಂಬಲಿಸಿದ್ದರೂ ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕಾಗಿಲ್ಲ. ನಾಡಿನ ಸಮಸ್ತ ಜನತೆ, ಪ್ರಾಜ್ಞರು, ಎಲ್ಲರೂ ಅದನ್ನು ತಡೆಯಲೇಬೇಕು. ಈಗಾಗಲೇ ಅದರ ವಿರುದ್ಧವಾಗಿ ಪ್ರತಿಭಟನೆಗಳು ನಡೆದಿವೆ, ನಡೆಯಲಿವೆ. ಕರ್ನಾಟಕದ ಜನತೆ ಅದನ್ನು ತೀವ್ರವಾಗಿ ವಿರೋಧಿಸಬೇಕು. ಮುಸ್ಲಿಂ ಹೆಸರಿಡುವುದಾದರೆ ಅಬ್ದುಲ್ ಕಲಾಂ ಹೆಸರನ್ನೋ, ಸಂತ ಶಿಶುನಾಳ ಶರೀಫರ ಹೆಸರನ್ನೋ ಇಡಲಿ. ಆದರೆ ಅದು ಮತಾಂಧರನ್ನು ಉಗ್ರಗಾಮಿಗಳನ್ನು ಉತ್ತೇಜಿಸುವ, ಸೃಜಿಸುವ ವಿಶ್ವವಿದ್ಯಾಲಯವಾಗದಂತೆ ಎಚ್ಚರವಹಿಸಬೇಕು.

**ಅನುಬಂಧ : ಟಿಪ್ಪು ಮಗ ತಿದ್ದಿಕೊಟ್ಟ ಕೃತಿ (ಪತ್ರಿಕೆಗೆ ನೀಡಿದ್ದು)**

ಕ್ರಿ.ಶ. 1885ರಲ್ಲಿ ಪ್ರಕಟವಾಗಿ 1976ರಲ್ಲಿ ಪುನರ್ಮುದ್ರಣಗೊಂಡಿರುವ ಕೃತಿಯ ಹೆಸರು "The History of Hyder Shah alias Hyder Ali Khan Bahadur and of his son Tippoo Sultan by M.M.D., LT., (General in the Army of the Mogul Empire). Revised and corrected by His Highness Prince Gholam Mohammad (The only surviving son of Tippu Sultan". 1774ರಲ್ಲಿ ಮೈಸ್ತೆದಿ ಲತೂರ್ ಬರೆದು ಟಿಪ್ಪು ಮಗನಿಂದ ತಿದ್ದಲ್ಪಟ್ಟ ಕೃತಿಯ ಕೆಲವು ಮಾತುಗಳು ಹೀಗಿವೆ. – "He (Tippu) is also said to have carried away from the province of Malabar 70000 Christians and to have 1,00,000 Hindus. The conversion of the latter (by forcible circumcision and compelling them to eat beef) although involuntary and abhorred, effectually answered the purpose of the Sultan........ . Tippu Sultan's zeal for the conversion of his subjects, however, was not confined to the people of Malabar....... It was probably about this time, that he isued an edict for the destruction of all the Hindu temples in his dominion, excepting those of Seringapatam and Mail Cotah (ಮೇಲ್ಕೋಟೆ)".

ಟಿಪ್ಪುವು ಲಕ್ಷಾಂತರ ಹಿಂದೂಗಳನ್ನು ಮತಾಂತರಿಸಿದ, ಹಲವು ಸಾವಿರ ಹಿಂದೂ ದೇವಾಲಯಗಳನ್ನು ನಾಶಪಡಿಸಿದ ಎಂಬ ಅವನ ಮಗನ ಹೇಳಿಕೆಯನ್ನು ಟಿಪ್ಪು ಬರೆದ ಪತ್ರಗಳು, ಹಾಕಿಸಿರುವ ಶಾಸನಗಳು, ಅವನ ಖಡ್ಗದ ಮೇಲಿನ ಶಾಸನ, ಕೇರಳ, ಕೊಡಗುಗಳ ಚರಿತ್ರೆಗಳು ಪುಷ್ಟೀಕರಿಸುತ್ತವೆ.

ಈ ಮಾಹಿತಿಗೆ ಡಾ. ಅನಂತಮೂರ್ತಿಯವರು (ಅವರ ಹೇಳಿಕೆ ಕ.ಪ್ರ. 1.1.13) ಏನು ಹೇಳುತ್ತಾರೆ? ನೇರ ಮಾಹಿತಿ ಮೂಲಕ ಉತ್ತರಿಸಲಿ. ಬ್ರಿಟೀಷರ ವಿರುದ್ಧ ಭಾರತದಾದ್ಯಂತ

ಹೋರಾಡಿದ್ದಾರೆ – ಅವರಲ್ಲಿ ಟಿಪ್ಪುವೇ ಮೊದಲಿಗನಲ್ಲ. ಹಿಂದೆಯೇ ತಮ್ಮ ರಾಜ್ಯಗಳನ್ನು ಉಳಿಸಿಕೊಳ್ಳಲು ಅನೇಕ ರಾಜರೂ ಹೋರಾಡಿದ್ದಾರೆ. ಅವರನ್ನು 'ಸ್ವಾತಂತ್ರ್ಯ ಹೋರಾಟಗಾರರು' ಎಂದು ಕರೆಯಬಹುದೇ? ಅನೇಕ ರಾಜರಂತೆ ಟಿಪ್ಪುವು ಶೂರ, ಧೈರ್ಯಶಾಲಿ: ಆದರೆ ಅವನು ಹಿಂದೂ ಕ್ರಿಶ್ಚಿಯನ್ ಧರ್ಮೀಯರ ಮೇಲೆ (ಕಾಫಿರರ ಮೇಲೆ) ನಡೆಸಿದ ಘೋರ ಹಿಂಸೆ ಉದಾಸೀನಾರ್ಹವೇ? ಅವನ ಹೆಸರಿನಲ್ಲಿ ಒಂದು ಉನ್ನತ ವಿದ್ಯಾಕೇಂದ್ರ ಸ್ಥಾಪಿಸುವುದು ಸರಿಯೇ? ಆಂಧ್ರದ ಅಕ್ಬರುದ್ದೀನ್ ಓವೈಸಿ ಹಿಂದಿನ ಟಿಪ್ಪು ಹೋಲುತ್ತಾನೆ.

– (ಡಾ. ಎಂ. ಚಿದಾನಂದಮೂರ್ತಿ)

ಟಿಪ್ಪು ತನ್ನ ಇಬ್ಬರು ಮಕ್ಕಳನ್ನೂ ಬ್ರಿಟಿಷರಲ್ಲಿ ಒತ್ತೆಯಿಟ್ಟ. 1799ರಲ್ಲಿ ಟಿಪ್ಪು ಸತ್ತನಂತರ ಹಂಜೆ ನಾಯಕನಾಗಿದ್ದ ಸೋದೆಯ ರಾಜ್ಯ ಇಂಗ್ಲಿಷರ ವಶವಾಗಿತ್ತು. ಆಗಲೂ ಸ್ವಾಭಿಮಾನಿ ಹಂಜೆ ನಾಯಕ ತನ್ನ ಬಂಡಾಯವನ್ನು ಮುಂದುವರಿಸಿದ ಕ್ರಿ.ಶ. 1801ರಲ್ಲಿ ಅವನು ಕಾಳಿ ನದಿ ದಾಟುತ್ತಿರುವಾಗ ಬ್ರಿಟಿಷರು ಅವನನ್ನು ಮೋಸದಿಂದ ಹಿಡಿದು ಕೊಂದರು. ಇದು ಹೆಂಜೆ ನಾಯಕನ ವೀರಗಾಥೆ.

ಬ್ರಿಟಿಷರಿಗೆ ಸೋತು ತನ್ನ ರಾಜ್ಯ, ಪ್ರಾಣ ಉಳಿಸಿಕೊಳ್ಳಲು ತನ್ನ ಇಬ್ಬರು ಮಕ್ಕಳನ್ನೇ ಒತ್ತೆಯಿಟ್ಟ ಟಿಪ್ಪು ಎಲ್ಲಿ? ಟಿಪ್ಪು ಹೆದರಿಸಿದರೂ ಅವನ ಇಬ್ಬರು ಮಕ್ಕಳನ್ನು ಸೆರೆ ಹಿಡಿದರೂ ಶರಣಾಗತನಾಗಲು ಒಪ್ಪದ ಹಂಜೆನಾಯಕ ಎಲ್ಲಿ? (ಮಾಹಿತಿ: ಎಂ.ಕೆ. ಶಾಸ್ತ್ರೀಯವರ "ಆ ಹೊತ್ತು ಈ ಹೊತ್ತಿಗೆ" ಕೃತಿ)

ಹೆಂಜೆ ನಾಯಕನ ಅಸ್ತಿತ್ವವೇ ಬಹಳ ಜನಕ್ಕೆ ತಿಳಿಯದು. ಟಿಪ್ಪುವು ತನ್ನ ಮಕ್ಕಳನ್ನು ಒತ್ತೆಯಿಟ್ಟು ಬಿಡಿಸಿಕೊಂಡುದು ಚರಿತ್ರೆಯ ಪುಟಗಳಲ್ಲಿ ವಿಜೃಂಭಿಸಿದೆ. ಅದೇ ಕಾಲದ ಹೆಂಜೆ ನಾಯಕ ಸೋಲುವ ಪ್ರಸಂಗ ಬಂದರೂ ತನ್ನ ಮಕ್ಕಳನ್ನು ಟಿಪ್ಪು ಸೆರೆಹಿಡಿದು ಕೊಂದರೂ ಶರಣಾಗತನಾಗಲಿಲ್ಲ. ಯಾರು ಸ್ವಾಭಿಮಾನಿ ಶೂರ?

**ಕೃತಿಕಾರರ ಬಗ್ಗೆ**: ಆತ್ಮೀಯ ಶ್ರೇಷ್ಠ ವಿದ್ವಾಂಸ (ದಿ) ಡಾ. ಶ್ರೀನಿವಾಸ ಹಾವನೂರರ ಮಗ ಶ್ರೀ ನಾಗೇಶ್ ಹಾವನೂರರು, ಕೃತಿಯನ್ನು ಎಚ್ಚರಿಕೆಯಿಂದ ಪರಿಶೀಲಿಸಿ ಕೃತಿಕಾರನ ಕುರಿತಂತೆ ನೀಡಿರುವ ವಿವರಗಳು ಹೀಗಿವೆ.

1. ಮೈಸ್ತೆ ಡೆ.ಲಾ.ತೂರ್ (M.D.L.T.) ಎಂಬ ಫ್ರೆಂಚ್ ವ್ಯಕ್ತಿ ಹೈದರನ ಸೈನ್ಯದಲ್ಲಿ ತೋಪುಖಾನೆಯ ಅಧಿಕಾರಿ.
2. 1782 ಹೈದರಾಲಿ ನಿಧನ; ಟಿಪ್ಪು ಅಧಿಕಾರ ಸ್ವೀಕಾರ.
3. 1783: M.D.L.T. ಯವರ ಕೃತಿ ಫ್ರೆಂಚ್ ಭಾಷೆಯಲ್ಲಿ The History of Hyder Ali Khan ಪ್ರಕಟಣೆ. ಇಂಗ್ಲಿಷ್ ಅನುವಾದ ಪ್ರಕಟಣೆ 1784ರಲ್ಲಿ.



4. ಟಿಪ್ಪು ಮಗ ಗುಲಾಂ ಮಹಮ್ಮದ್ ಜನನ 1795; ಟಿಪ್ಪು ಸಾವು 1799
5. M.D.L.T. ಯಿಂದ ಟಿಪ್ಪು ಬಗೆಗಿನ ನೆನಪುಗಳ ರಚನೆ – ಅವನ ಹೈದರ್, ಟಿಪ್ಪು ಬಗೆಗಿನ ತನ್ನ ನೆನಪುಗಳ ಇಂಗ್ಲಿಷ್ ಕೃತಿಯು ಟಿಪ್ಪುವಿನ ಏಕಮಾತ್ರ ಜೀವಂತ ಪುತ್ರ ಗುಲಾಂ ಮಹಮ್ಮದ್ ನಿಂದ ತಿದ್ದಲ್ಪಟ್ಟು ಪ್ರಕಟವಾಯಿತು, 1855ರಲ್ಲಿ. ಕೃತಿಕಾರ M.D.L.T.; ಕೃತಿಯ ಹೆಸರು "The History of Hyder Ali Shah alias Hyder Ali Khan and of his son Tippoo Sultan". ಇದನ್ನು ಪರಿಷ್ಕರಿಸಿ ತಿದ್ದಿಕೊಟ್ಟವನು – His Highness Prince Gholam Mohammad (The only surviving son of Tippoo Sultan)

ಟಿಪ್ಪು ಸಾವು 1799ರಲ್ಲಿ; (MDLT) - ಫ್ರೆಂಚ್ ಕೃತಿಕಾರ ಹೈದರ್, ಟಿಪ್ಪು ಬಗ್ಗೆ ಸಮಕಾಲೀನನಾಗಿ ದಾಖಲಿಸಿದ ಕೃತಿಗಳನ್ನು ಟಿಪ್ಪು ಮಗ ಗುಲಾಂ ಮಹಮ್ಮದ್ ತಿದ್ದಿಕೊಟ್ಟ ಪುಸ್ತಕದ ಪ್ರಕಟಣೆ 1855ರಲ್ಲಿ. ಆಗ ಮಹಮ್ಮದ್ ವಯಸ್ಸು 60 ವರ್ಷ.

❋❋❋❋

## 8. ಶೃಂಗೇರಿ ಇತ್ಯಾದಿ ಕ್ಷೇತ್ರಗಳಿಗೆ ಟಿಪ್ಪು ಕೊಟ್ಟ ದತ್ತಿಗಳು.

ಶೃಂಗೇರಿ ಮಠಕ್ಕೆ ಟಿಪ್ಪು ನೀಡಿರುವ ದತ್ತಿಗಳು ಅವನ ಸರ್ವಧರ್ಮ ಪ್ರೇಮ ದ್ಯೋತಕ ಎಂದು ಹಲವರು ವಾದಿಸಿದ್ದಾರೆ. ಆ ದಾಖಲೆಗಳನ್ನು ಎಚ್ಚರಿಕೆಯಿಂದ ಗಮನಿಸಿದರೆ ಒಂದು ಸಂಗತಿ ಸೂಚಿತವಾಗುತ್ತದೆ. ಟಿಪ್ಪು ತಾನೇ ಸ್ವ-ಇಚ್ಛೆಯಿಂದ ದತ್ತಿಗಳನ್ನು ಕೊಟ್ಟಿಲ್ಲ. ಶೃಂಗೇರಿ ಮಠಕ್ಕೆ ದುಷ್ಟ ಶಕ್ತಿಗಳು ಧಾಳಿ ಇಟ್ಟು (ಬಹುಶಃ ಮರಾಠಿಗರು) ಅವರ ಸಂಪತ್ತನ್ನು ಲೂಟಿ ಮಾಡಿದಾಗ, ಹಣದ ಕೊರತೆಯಿಂದ ಬಳಲುತ್ತಿದ್ದ ಶೃಂಗೇರಿ ಮಠದ ಸಚ್ಚಿದಾನಂದ ಸ್ವಾಮಿಗಳು ತಮ್ಮ ಮಠವು ಟಿಪ್ಪು ರಾಜ್ಯದಲ್ಲಿರುವುದರಿಂದ ಸಹಾಯಧನ ಪತ್ರ ಬರೆದು ಕೇಳಿಕೊಂಡಿದ್ದರ ಫಲವಾಗಿ ಟಿಪ್ಪುವು ಅದಕ್ಕೆ ಸ್ಪಂದಿಸಿದಂತೆ ಕಾಣುತ್ತದೆ. ಶ್ರೀ ಸ್ವಾಮಿಗಳು 23.4.1782ರಂದು ಟಿಪ್ಪುಗೆ ಬರೆದ ಪತ್ರದ ಪಾಠ ಇದು – (ಸಂ: ಡಾ. ಎ.ಕೆ. ಶಾಸ್ತ್ರೀ: ಶೃಂಗೇರಿ ಮಠದ ಕಡತಗಳಲ್ಲಿರುವ ಆಯ್ದ ಚಾರಿತ್ರಿಕ ದಾಖಲೆಗಳು. 2006. ಪು 247). "ನಗರದಿಂದ ನವಾಬರು ಬರಸಿ ಕಳುಹಿಸ್ತಬಿಂನವತ್ತಳೆ ಪ್ರತ್ತಿ ಮೆಲೆ ದೊಡ ಬಿರುದಾವಳಿ ಬರದು ಶೃಂಗೇರಿ ಶ್ರೀ ಸಚ್ಚಿದಾನಂದ ಭಾರತಿ ಸ್ವಾಮಿಗಳವರಿಗೆ ನವಾಬ ಟಿಪ್ಪು ಸುಲ್ತಾನ ಬಹದರವರು ಮಾಡುವ ವಿಜ್ಞಾಪನ, ಕಳುಹಿದ ಪತ್ರಿಕಾಭಿಪ್ರಾಯಂದ ಸಕಲ ಉ ತ್ತಿಳಿಯಲಾಯಿತ್ತು. ಶ್ರೀ ಶಾರದಮ್ಮನವರ ಪ್ರಸಾದ ವಸ್ತ್ರಗಳು ಸಹಾ ಕಳುಹಿಸಿದ್ದು ಬಂದು ಮುಟಿತ್ತು ನಂಮ ಶ್ರೇಯೋಲೋಭಿವ್ರಧಿ ಗೊಸ್ಕರವಾಗಿ ತಪಸು ಮಾಡಿಕೊಂಡು ಯಿರುವದು ಸಹಜವೇ ಸರ್ರಿಯಿಗಶಹಲು ಜೋಡುವಂದರನ್ನು ಕಳುಹಿಸಿ ಯಿರುವದರ್ರಿಯಿಂದ ಸ್ವೀಕರಿಸುವ ಹಾಗೆ ಮಾಡತಕ್ಕದ್ದು. ಅರಮನೆ ಸೀಮೆ ಗಡ್ಡಿಗಳಲ್ಲಿ ಇರುವ ಪುಣ್ಯ ಕ್ಷೇತ್ರಗಳ ದೆವತಾ ದರುಶನ ಸಂಚಾರಾರ್ಥವಾಗಿ ರಹದಾರಿಯನ್ನು ಮೊದಲೇ ಕಳುಹಿಸಿ ಯಿಧಿತಷ್ಟೆ ನಂಮ ಶ್ರೆಯೊಭಿ ಉಧ್ರಿ ಆಗುವ ಪ್ರಕಾರಕ್ಕೆ ಸಾರ್ವಕಾಲದಲ್ಲೂ ತಪಸ್ಸು ಮಾಡುತ್ತಾ ಆಗಾಗ್ಗೆ ಶ್ರೀ ಶಾರದಾಂಮ್ಮನವರ ಪ್ರಸಾದ ಮಂತ್ರಾಕ್ಷತೆ ಸಹಾ ಕಳುಹಿಸಿಕೊಡುವ ಹಾಗೆ ಮಾಡ್ಡಿಸವದು ಶೊಭ ಕ್ರುತು ಸಂವತ್ಸರದ ವೈಶಾಖ ಶು 10 ಲು"

ಟಿಪ್ಪುವಿನ ದಾನ ಪತ್ರಗಳಲ್ಲಿ ಇದೇ ಅತ್ಯಂತ ಪ್ರಾಚೀನವಾದುದು ಮತ್ತು ಈ ಪತ್ರ ಎಚ್ಚರಿಕೆಯಿಂದ ಪರಿಶೀಲಿಸಬೇಕಾದ್ದು. ಹಾಗೆಯೇ ಅದೇ ದಿನ (23.4.1782) ಟಿಪ್ಪು ಬರೆದಿರುವ ಪತ್ರವೂ ಗಮನಾರ್ಹ:

"ರಹದಾರಿ ಪ್ರತ್ರಿ ಶೊಭಕ್ರುತು ಸಂವತ್ಸರದ ವೈಶಾಖ ಶು. 10ಲ್ಲು ಶ್ರೀಮತು ಟಿಪ್ಪು ಸುಲತ್ತಾನು ಬಹದವರು ಅರಮನೆ ಸಿಮೆ ಗಡ್ಡಿಗಳ ಕಿಲೆದಾರು ಪಾರುಪತ್ಯೆಗಾರಗೆ ಬರಸಿ



ಕಳುಹಿದ ನಿರುಪ ಅದಾಗಿ ಶೃಂಗೆರಿ ಸ್ವಾಮಿಗಳವರು ನಿಂಮ ಗಡ್ಡಿಗಳ ಮಾರ್ಗವಾಗಿ ಸಂಚಾರಾರ್ಥವಾಗಿ ಬರುವಲ್ಲಿ ನಿಉ ಹೊಗಿ ಯೆದರುಗೊಂಡು ಯಿಉಳಿಲಿಕ್ಕೆ ...." ಇತ್ಯಾದಿ

ಎರಡೂ ಪತ್ರಗಳನ್ನು ಟಿಪ್ಪು ಒಂದೇ ದಿನ ಬರೆದಿದ್ದಾನೆ. ಮೊದಲ ಪತ್ರದಲ್ಲಿ ಸ್ವಾಮಿಗಳು ತನಗೆ ಆಶೀರ್ವದಿಸಿ ತನ್ನ ಕ್ಷೇಮಾಭಿವೃದ್ಧಿ ಹಾರೈಸಿ ತನಗಾಗಿ 'ಸರ್ವ ಕಾಲದಲ್ಲೂ ತಪಸ್ಸು' ಮಾಡುತ್ತ ಶಾರದಾದೇವಿಯ ಮಂತ್ರಾಕ್ಷತೆಯನ್ನು ಕಳುಹಿಸಿದ್ದು ಟಿಪ್ಪುವಿಗೆ ಬಹು ಹರ್ಷವುಂಟು ಮಾಡಿದ್ದನ್ನು ಹೇಳಲಾಗಿದೆ. ಪ್ರಭಾವಶಾಲಿ ಹಿಂದೂ ಮಠವೊಂದರ ಸ್ವಾಮೀಜಿಯವರಿಂದ ಆಶೀರ್ವಾದ ದೊರಕಿದ್ದು, ಹಿಂದೂ ಪ್ರಜೆಗಳು ಆ ಮೂಲಕ ತನ್ನ ಪರವಾಗಿ ಇರುವರೆಂಬ ನಂಬಿಕೆ ಇಟ್ಟುಕೊಂಡು ಇವುಗಳಿಂದವನು ಶೃಂಗೇರಿ ಮಠಕ್ಕೆ ಕೃತಜ್ಞತೆ ಅರ್ಪಿಸಿ ಮುಂದೆ ಹಲವು ದತ್ತಿಗಳನ್ನು ನೀಡಿದನು. ಶೃಂಗೇರಿ ಸ್ವಾಮಿಗಳು ತಮ್ಮ ಸಂಚಾರದಲ್ಲಿ ಜನರಿಂದ ಕಳ್ಳಕಾಕರಿಂದ ಅಡ್ಡಿಯಾಗುತ್ತಿರುವ ವಿಷಯವನ್ನು ಇನ್ನೊಂದು ಪತ್ರದಲ್ಲಿ ತಿಳಿಸಿದ್ದರಿಂದ ಅವರ ಸರಾಗ ಸಂಚಾರಕ್ಕೆ ಅವನು ಆದೇಶ ಹೊರಡಿಸಿದ್ದಾನೆ. ತನ್ನ ರಾಜ್ಯದ ಬೇರೆ ಬೇರೆ ಪ್ರದೇಶಗಳಲ್ಲಿದ್ದ ಖಿಲ್ಲೆದಾರರಿಗೆ (ಕೋಟೆಯ ರಕ್ಷಣೆ ನೋಡಿಕೊಳ್ಳುವ ಅಧಿಕಾರಿಗಳು) ಪಾರುಪತ್ಯೇದಾರರಿಗೆ (ಕೋಟೆ ಹೊರಗಿನ ಪ್ರದೇಶದ ಉಸ್ತುವಾರಿ ನೋಡಿಕೊಳ್ಳುವ ಅಧಿಕಾರಿ) ಸೂಚನೆ ನೀಡಿ ಶೃಂಗೇರಿ ಮಠದ ಸ್ವಾಮಿಗಳಿಗೆ ತೊಂದರೆಯಾಗದಂತೆ ಆದೇಶ ನೀಡಿದ್ದಾನೆ.

24.7.1782ರ ಪತ್ರದಲ್ಲಿ ಸ್ವಾಮಿಗಳು ದೇವರ ಪ್ರಸಾದ ಮಂತ್ರಾಕ್ಷತೆ ಕಳುಹಿಸಿದ್ದರಿಂದ ಟಿಪ್ಪು ಹಲವು ಸಾವಿರ ವರಾಹಗಳನ್ನು ನೀಡಿದ್ದಾನೆ. 24.4.1787ರ ಪತ್ರದಲ್ಲಿ ಗ್ರಾಮವನ್ನು ವರಾಹಗಳನ್ನು ಮಠಕ್ಕೆ ನೀಡಿ "ಯಿ ಧರ್ಮಕ್ಕೆ ಮುಸಲಮಾನ ವಿಘ್ನಮಾಡಿದರೆ ಮಕ್ಕೆವಳಗೆ (= ಮಕ್ಕಾ ಒಳಗೆ) ಪಾಪಾ ಮಾಡಿದ ಹಾಗೆ; ಹಿಂದೂ ವಿಘ್ನ ಮಾಡಿದರೆ ಕಾಶಿವಳಗೆ ಗೋಹತ್ಯ ಮಾಡಿದ ಹಾಗೆ" ಎಂದು ಹೇಳಿದ್ದಾನೆ. ಶತ್ರುಗಳ ಸೇನೆ (ಮರಾಠರ ಸೇನೆ) ಪ್ರಜೆಗಳಿಗೆ ಉಪದ್ರವ ನೀಡಿದರೆ ಅದನ್ನು ನಿವಾರಿಸುವುದಾಗಿ ಒಂದು ಪತ್ರದಲ್ಲಿ (ಸಂ. 107) ಹೇಳಿದ್ದಾನೆ. ಮರಾಠರ ಉಪದ್ರವವನ್ನು ನಿವಾರಿಸುವುದಾಗಿ ಭರವಸೆ ನೀಡಿದ್ದಾನೆ. ಬಹುತೇಕ ಟಿಪ್ಪು ಪತ್ರಗಳು ಶೃಂಗೇರಿ ಜಗದ್ಗುರುಗಳ ಕೋರಿಕೆಗೆ ಸ್ಪಂದಿಸಿದುವಾಗಿವೆ. ಸ್ವಾಮಿಗಳು ತಮ್ಮ ಪತ್ರದಲ್ಲಿ ಮರಾಠರಿಂದ ತಮ್ಮ ಮಠಕ್ಕೆ ತೊಂದರೆಯಾಗಿದೆಯೆಂದು ತಿಳಿಸಿದ್ದರಿಂದ (ಪತ್ರ 112) ಅದಕ್ಕೆ ಪ್ರತಿಕ್ರಿಯಿಸಿ ಬರೆದ ಟಿಪ್ಪು ಪತ್ರದ ಒಂದು ಭಾಗ ಹೀಗಿದೆ "ಮರಾಠರ ಕಡೆ ಕುದುರೆಯವರು ಬಂದು ಶ್ರುಂಗೆರಿಯಲ್ಲಿದ್ದ ಬ್ರಾಹ್ಮರ ಮುಂತಾದವರನ್ನು ಬಹಳ ಘಾತ ಪಾತಗಳ ಮಾಡ್ಡಿ ಶಾರದಮ್ಮನವರನ್ನು ಕಿತ್ತುಹಾಕಿ ಮಠದಲ್ಲಿ ಇದ್ದ ಯಾವತ್ತು .ಸಾಮಾನನ್ನು ತೆಗೆದುಕೊಂಡುಹೊದ ಕಾರಣ ನಾಲ್ಕು ಜನ ಶಿಷ್ಯರು ಸಹಕಾರಕಕ್ಕೆ ಬಂದು ಯಿರುವದರ್ರಿಂದಾ ಶಾರದಾಂಮನವರ್ರು ಯುಗಾಂತರದಲ್ಲಿ ಪ್ರತಿಷ್ಟೆ ಅದ ಹೊರಿತ್ತು ಮತೊಂದಲ್ಲಾ ದೇವರ ಪ್ರತಿಷ್ಠೆ ಆಗಬೇಕಾದರೆ ಸರಕಾರದಿಂದ ಕುಮ್ಮಕು ಆಗಿ ದೇವರ ಪ್ರತಿಷ್ಠೆ ಮಾಡಿಸಿದಲ್ಲಿ ಸೂರ್ಯ ಚಂದ್ರರು ಉಳ್ಳ ಪರಿಯಂತ್ರ

ಕೀರ್ತಿ ನಿಲ್ಲುತಾಗಿತ್ತು" ಮರಾಠರು ಕಿತ್ತು ಹಾಕಿದ ಶಾರದಾ ದೇವಿಯ ಮೂರ್ತಿಯ ವಿಗ್ರಹವನ್ನು ಮತ್ತೆ ಪ್ರತಿಷ್ಠಾಪಿಸಲು ಟಿಪ್ಪು ಸಹಾಯಮಾಡುತ್ತಾನೆ. ಇನ್ನೊಂದು ಪತ್ರದಲ್ಲಿ (ಸಂಖ್ಯೆ 115) ತನ್ನ ಆಡಳಿತಕ್ಕೆ ಅಭ್ಯುದಯ ಆಗಲು, "ಶತ್ರುಗಳ ನಾಶವಾಗು ಪ್ರಕಾರ ಸಹಾ ಯಿಶ್ವರ ಪ್ರಾರ್ಥನೆ ಮಾಡ್ಡುವ ಮಾಡ್ಡಿಸಿವದು". ಎಂದರೆ ಟಿಪ್ಪು ತನ್ನ ಶತ್ರುಗಳನ್ನು ನಾಶಪಡಿಸಲು ಭಗವಂತನಲ್ಲಿ ಪ್ರಾರ್ಥಿಸುವಂತೆ ಶೃಂಗೇರಿ ಸ್ವಾಮಿಗಳನ್ನು ಕೇಳಿಕೊಂಡಿದ್ದಾನೆ. ಟಿಪ್ಪು ಶೃಂಗೇರಿಯಲ್ಲಿ ಸ್ಥಾಪಿಸಲು ಒಂದು ಸ್ಫಟಿಕ ಲಿಂಗ, ಒಂದು ಮರಕತ ಲಿಂಗವನ್ನು ನೀಡಿದ್ದಾನೆ. (ಸಂ. 120).

ಶೃಂಗೇರಿ ಜಗದ್ಗುರುಗಳು ಮತ್ತು ಟಿಪ್ಪು ಇವರ ಮಧ್ಯೆ 1782ರಿಂದ ಟಿಪ್ಪುವಿನ ಕೊನೆ ವರ್ಷದ ಹಿಂದಿನ ವರ್ಷದವರೆಗೆ (1798) ನಿರಂತರವಾಗಿ ಪತ್ರ ವ್ಯವಹಾರ ನಡೆದಿದೆ. ಶೃಂಗೇರಿ ಜಗದ್ಗುರುಗಳಿಗೆ ಅವನಿಂದ ನಡೆದಿರುವ ಅಪರಾಧಗಳು ತಿಳಿದಿದ್ದವೋ ಇಲ್ಲವೋ ತಿಳಿಯದು. ತಿಳಿದಿದ್ದರೂ ಅವರು ಏನೂ ಮಾಡುವಂತಿರಲಿಲ್ಲ. ಅವನು ರಾಜನಾದ್ದರಿಂದ ಅವನಿಂದ ಬಂದ ದತ್ತಿಗಳನ್ನು ಸ್ವೀಕರಿಸಿ ಅವನಿಗೆ ಆಶೀರ್ವಾದ ಮಾಡುವುದು ತಮ್ಮ ಕರ್ತವ್ಯವೆಂದು ಅವರು ಭಾವಿಸಿದ್ದಿರಬೇಕು. ಟಿಪ್ಪು ಶ್ರೀಮಂತ ದೊರೆಯಾದ್ದರಿಂದ ಅವನು ಗ್ರಾಮಕ್ಕೆ ಉದಾರವಾಗಿ ದೇಣಿಗೆ ನೀಡಿದ– ಅವನಿಗೆ ಬೇಕಾಗಿದ್ದುದು ಶೃಂಗೇರಿ ಗುರುಗಳ ಆಶೀರ್ವಾದ, ಮತ್ತು ಆ ಮೂಲಕ ಹಿಂದೂ ಜನತೆಯ ವಿಶ್ವಾಸ. ಹಿಂದೂಗಳಾಗಿದ್ದ ಮರಾಠರೇ ಶೃಂಗೇರಿ ಐಶ್ವರ್ಯವನ್ನು ಕೊಳ್ಳೆ ಹೊಡೆದು ಶಾರದಾ ವಿಗ್ರಹವನ್ನು ಭಗ್ನಮಾಡಿದ್ದರಿಂದ ಅವನ್ನು ಸ್ಥಾಪಿಸುವಲ್ಲಿ ಸಹಕರಿಸಿದ ಟಿಪ್ಪುವನ್ನು ಅವರು ಆಶೀರ್ವದಿಸುವುದು ಅನಿವಾರ್ಯವಾಗಿದ್ದಿತು. ಅವರು ಮನಃಪೂರ್ವಕವಾಗಿ ಆಶೀರ್ವದಿಸಿದರೋ ಇಲ್ಲವೋ ಎಂಬ ಅನುಮಾನ ನನಗೆ ಉಳಿದಿದೆ.

ಶೃಂಗೇರಿ ಮಠದ ದಾಖಲೆಗಳನ್ನು ಪ್ರಕಟಿಸಿರುವ ಮತ್ತು ಇತಿಹಾಸ ಕ್ಷೇತ್ರದಲ್ಲಿ ವಸ್ತುನಿಷ್ಠವಾಗಿ ಕೆಲಸಮಾಡಿರುವ ಡಾ. ಎ. ಕೆ. ಶಾಸ್ತ್ರಿಯವರು ನನಗೆ ಬರೆದಿರುವ ಪತ್ರವೊಂದರಲ್ಲಿ (10–12–2012) ಹೀಗೆ ಹೇಳಿದ್ದಾರೆ – "ದಾಖಲೆಗಳ ಪಾಠ ವಿಮರ್ಶಿಸದೆ, ಅವುಗಳ ಅಂಶಗಳನ್ನು ಹಾಗೇ ಒಪ್ಪಿಕೊಂಡಲ್ಲಿ ತಪ್ಪಾಗುತ್ತದೆ. ಟಿಪ್ಪು ಶೃಂಗೇರಿ ಸ್ವಾಮಿಗಳನ್ನು ಮತ್ತು ಮಠವನ್ನು ರಕ್ಷಿಸಿ, ಗೌರವಿಸಿದ ಎಂಬುದು ನಿಜ. ಆದರೆ ಆತನು ಇನ್ನುಳಿದ ಹಿಂದೂ ಸ್ವಾಮಿಗಳನ್ನು, ಮಠಗಳನ್ನು ಮತ್ತು ಹಿಂದೂಗಳನ್ನು ಅದೇ ಗೌರವ ಭಾವನೆಯಿಂದ ಕಂಡನೇ? ಅಥವಾ ವ್ಯತಿರಿಕ್ತವಾಗಿ ನಡೆದುಕೊಂಡನೇ? ಎಂಬುದು ಪ್ರಶ್ನೆ. ಈ ಅಂಶವನ್ನೂ ಸಂಶೋಧಕರು ಬೆಳಕಿಗೆ ತಂದರೆ ಸೂಕ್ತ. 'ಟಿಪ್ಪು ದೇಶಕ್ಕಾಗಿ ಹೋರಾಡಿ ಹುತಾತ್ಮನಾದ' ಎಂಬ ಅಭಿಪ್ರಾಯವನ್ನು ನಾನಾಗಲೀ, ಇಲ್ಲವೇ ಪ್ರಾಜ್ಞ ಇತಿಹಾಸ ಸಂಶೋಧಕರಾಗಲೀ ಒಪ್ಪಲಾರರು. ಅಂದಿನ ಹೋರಾಟ ಸ್ವಾರ್ಥಸಾಧನೆಗಾಗಿ ಮತ್ತು ರಾಜ್ಯ ವಿಸ್ತರಣೆಗಾಗಿ. ...... ಆಂಗ್ಲರು, ಮರಾಠರು, ನಿಜಾಮ ಮತ್ತು ಇತರ ವೈರಿಗಳಿಂದ ಸುತ್ತುವರಿಯಲ್ಪಟ್ಟ ಟಿಪ್ಪು ಕಷ್ಟ ನಿವಾರಣೆಗೆಂದು, ಹಿಂದೂ ಸ್ವಾಮಿಗಳಲ್ಲಿಯೇ ಹೆಸರುವಾಸಿಯಾದ ಶೃಂಗೇರಿ ಜಗದ್ಗುರುಗಳನ್ನು ಮತ್ತು ಅವರ ಮಠವನ್ನು ಗೌರವಿಸಿ ಹಿಂದುಗಳ



ಅನುಕಂಪ ಪಡೆಯಲೆತ್ನಿಸಿದನೆಂಬುದೂ ಒಂದು ಪ್ರಬಲ ವಾದ. ಈ ಅಭಿಪ್ರಾಯವನ್ನು ಸುಲಭವಾಗಿ ತಳ್ಳಿಹಾಕುವಂತಿಲ್ಲ......" ಡಾ. ಶಾಸ್ತ್ರಿಗಳು ದೂರವಾಣಿ ಮೂಲಕವೂ ಮಾತನಾಡಿ ಟಿಪ್ಪು ಬಗೆಗಿನ ತಮ್ಮ ನಿಲುವನ್ನು ತಿಳಿಸಿದ್ದಾರೆ. ಅವರ ನಿಲುವು ನನ್ನ ನಿಲುವು ಬಹುತೇಕ ಸಮಾನವಾದುದು.

ಟಿಪ್ಪು ನಂಜನಗೂಡು, ಕಳಲೆ, ಮೇಲ್ಕೋಟೆ, ಇತ್ಯಾದಿ ಕಡೆಯ ದೇವಸ್ಥಾನಗಳಿಗೆ ಮಾಡಿಸಿಕೊಟ್ಟಿರುವ ಬೆಳ್ಳಿ ಬಟ್ಟಲು, ಗಂಟೆ ಇತ್ಯಾದಿಗಳ ಮೇಲಿನ ಶಾಸನಗಳನ್ನು ನೋಡಿದ್ದೇನೆ. ಅವನ ಕೈಕೆಳಗಿನ ಅಧಿಕಾರಿಗಳ ಕೋರಿಕೆ ಮೇಲೆ ಟಿಪ್ಪು ಅವುಗಳನ್ನು ಮಾಡಿಸಿಕೊಟ್ಟ ಎಂಬುದಕ್ಕೆ ಸೂಚನೆಗಳಿವೆ.

****

48

## 9. The Mysore Pradhanas ಇತ್ಯಾದಿಗಳಿಂದ ಮಾಹಿತಿ

ಇಂದಿಗೂ ಶ್ರೀರಂಗಪಟ್ಟಣ, ಮೈಸೂರು ಪ್ರದೇಶದ ಮಂಡಯಂ ಅಯ್ಯಂಗಾರ್ ವರ್ಗದ ಜನರು ದೀಪಾವಳಿಯ ಹಬ್ಬವನ್ನು (ನರಕಚತುರ್ದಶಿ, ಬಲಿಪಾಡ್ಯಮಿ) ಶೋಕದ ದಿನವನ್ನಾಗಿ ಆಚರಿಸುತ್ತಾರೆ. ಮೈಸೂರು ಪ್ರಧಾನರಾಗಿದ್ದ ತಿರುಮಲೆ ಅಯ್ಯಂಗಾರ್ ಅವರ ವಂಶಕ್ಕೆ ಸೇರಿದ ಈಗಿನ ವಂಶಸ್ಥರೇ ಹೇಳುತ್ತಾರೆ. ಭಾರದ್ವಾಜ ಗೋತ್ರದ ಮಂಡಯಂ ಅಯ್ಯಂಗಾರ್ ಜನರು ಅದನ್ನು ಖಚಿತಪಡಿಸುತ್ತಾರೆ. ನನಗೂ ನೇರವಾಗಿ ಪತ್ರ ಬರೆದಿರುವ ಅದೇ ವರ್ಗಕ್ಕೆ ಸೇರಿದ ಡಾ. ಮಂಡಯಂ ಆನಂದರಾಯರೂ ಅದೇ ಅಭಿಪ್ರಾಯವನ್ನು ಬೆಂಬಲಿಸಿದ್ದಾರೆ. ಆ ದಿನ ಟಿಪ್ಪುವು ಆ ವರ್ಗದ ಏಳು ನೂರು ಬ್ರಾಹ್ಮಣ ಕುಟುಂಬಗಳನ್ನು ನಿರ್ದಯವಾಗಿ ಕೊಂದು ಹಾಕಿಸಿದ. ಟಿಪ್ಪು ಕಾಲದಲ್ಲಿ ಇಮ್ಮಡಿ ಕೃಷ್ಣರಾಜ ಒಡೆಯರ್ ಅವರು ನಿಧನರಾಗಿ ಅವರ ಪತ್ನಿ ವಿಧವೆ ರಾಣಿ ಲಕ್ಷ್ಮಮ್ಮಣ್ಣಿಯು ಹೈದರ್, ಟಿಪ್ಪು ಅಪಹರಿಸಿದ ರಾಜ್ಯವನ್ನು ಮತ್ತೆ ದೊರಕಿಸಿಕೊಳ್ಳಲು ಪ್ರಧಾನ್ ತಿರುಮಲ ಅಯ್ಯಂಗಾರ್ (ಈತ ಮಂಡಯಂ ಅಯ್ಯಂಗಾರ್) ಮೂಲಕ ಬ್ರಿಟಿಷರೊಡನೆ ಗುಟ್ಟಾಗಿ 1770ರ ಸುಮಾರಿನಲ್ಲಿ ಸಂಧಾನ ನಡೆಸಿದಳು. ಅದನ್ನು ತಿಳಿದ ಹೈದರಾಲಿ ತಿರುಮಲ ಅಯ್ಯಂಗಾರರ ಎಲ್ಲ ಬಂಧುಗಳನ್ನು ಸೆರೆಯಲ್ಲಿ ಹಾಕಿದನು. 1790ರಲ್ಲಿ ಮದ್ರಾಸ್ ಗವರ್ನರ್ ಜ. ಹ್ಯಾರಿಸ್ ಮತ್ತು ತಿರುಮಲ ಅಯ್ಯಂಗಾರ್ ನಡುವೆ ಒಪ್ಪಂದ ಆದಾಗ ಅದರಿಂದ ರೊಚ್ಚಿಗೆದ್ದ ಟಿಪ್ಪು ಏಳುನೂರು ಕುಟುಂಬದ ದಿವಾನ್ ವರ್ಗಕ್ಕೆ ಸೇರಿದ್ದ ಮಂಡ್ಯಂ ಅಯ್ಯಂಗಾರ್ ಜನರನ್ನು ಕೊಂದು ಹಾಕಿದನು.

ಮುಂದಿನ ವಿವರಗಳು ಎಂ. ಎ. ನಾರಾಯಣ ಅಯ್ಯಂಗಾರ್ ಮತ್ತು ಎಂ. ಎ. ಶ್ರೀನಿವಾಸಾಚಾರ್ ಬರೆದಿರುವ "The Mysore Pradhanas" (1902. ಮರು ಮುದ್ರಣ 1981) ಕೃತಿಯಿಂದ. 1762ರ ಸುಮಾರಿನಲ್ಲಿ ಕೆಳವರ್ಗದ ಅಧಿಕಾರಿ, ಬಹು ಸಮರ್ಥ ಹೈದರನು ತನ್ನ ರಾಜನ ರಾಜ್ಯವನ್ನು ಆಕ್ರಮಿಸಿ ಪ್ರಧಾನ್ ಗೋವಿಂದ ರಾಜಯ್ಯನ ಐಶ್ವರ್ಯವನ್ನು ಅಪಹರಿಸಲು ಸೈನಿಕರನ್ನು ಕಳುಹಿಸಿದಾಗ ಪ್ರಧಾನನು ತನ್ನ ನಿಧಿಯನ್ನು ಬಚ್ಚಿಟ್ಟಿದ್ದರಿಂದ ಅವನನ್ನು ಕೊಲ್ಲಲಾಯಿತು. ಪ್ರಧಾನ್ ಗೋವಿಂದ ರಾಜಯ್ಯಂಗಾರನಿಗೆ ಆಗ ತಿರುಮಲ ರಾವ್ ಮತ್ತು ನಾರಾಯಣರಾವ್ (ತಿರುಮಲ ಅಯ್ಯಂಗಾರ್, ನಾರಾಯಣ ಅಯ್ಯಂಗಾರ್) ಎಂಬ ಇಬ್ಬರು ಮಕ್ಕಳಿದ್ದರು.

ಮಹಾರಾಜ ಇಮ್ಮಡಿ ಕೃಷ್ಣರಾಜ ಒಡೆಯರ್ ನಿಧನರಾಗಿ ಅವರ ವಿಧವೆ ಮಹಾರಾಣಿ ಲಕ್ಷ್ಮಮ್ಮಣ್ಣಿಯ ಅಧಿಕಾರ ಕಸಿದ ನವಾಬನನ್ನು ಒಪ್ಪಿಕೊಳ್ಳಲಾರದೆ ಅವಳು ಪ್ರಧಾನ್ ತಿರುಮಲರಾವ್ ಸೋದರರ ಜೊತೆ ಒಳಸಂಧಾನ ನಡೆಸಿದಳು. ಅವರ ಮೂಲಕ ಬ್ರಿಟಿಷರೊಡನೆ ಪತ್ರ ವ್ಯವಹಾರ ಮಾಡಿದಳು. ಟಿಪ್ಪುವು ಅದನ್ನು ತಿಳಿದು ತಿರುಮಲರಾವ್ ಮತ್ತು ಸುಬ್ಬರಾಜ್ ಅರಸ್ ಅವರ ಏಳುನೂರು ಬಂಧುಗಳನ್ನು, ಗಂಡಸರು, ಹೆಂಗಸರು, ಮಕ್ಕಳು ಸೇರಿದಂತೆ



ಎಲ್ಲರನ್ನೂ ಸೆರೆಯಲ್ಲಿಟ್ಟ, ಆಗ ಪ್ರಧಾನ್ ತಿರುಮಲರಾವ್ ಟಿಪ್ಪು ಹಿಡಿತದಿಂದ ಕಣ್ಮರೆಯಾದ್ದರಿಂದ ಅವನ ಆ ಏಳುನೂರು ಜನರೆಲ್ಲರನ್ನೂ ನಿರ್ದಯವಾಗಿ ಕೊಲ್ಲಿಸಿ, ಪ್ರಧಾನರಿಗೆ ಬಳುವಳಿಯಾಗಿ ಬಂದಿದ್ದ ಜಹಗೀರ್ ಮತ್ತು ಆಸ್ತಿಗಳನ್ನು ವಶಪಡಿಸಿಕೊಂಡ ತಿರುಮಲರಾವ್ ಕ್ರಮೇಣ ಮೈಸೂರು ರಾಜ್ಯ ತ್ಯಜಿಸಿ ಮದ್ರಾಸ್ ಪ್ರಾಂತ್ಯಕ್ಕೆ ಹೋದ – ಅವನು ಬ್ರಿಟಿಷರಿಗೆ ಬೆಂಬಲವಾಗಿ ನಿಂತು 'ಹಿಂದೂ ರಾಜ್ಯ'ವನ್ನು ಮೈಸೂರರಸರಿಗೆ ದೊರಕುವಂತೆ ಮಾಡಲು ಶ್ರಮಿಸಿದ.

ಮಹಾರಾಣಿ ಲಕ್ಷ್ಮೀ ಅಮ್ಮಣ್ಣಿ ಪ್ರತಿನಿಧಿಗಳಾದ ಮೈಸೂರು ಪ್ರಧಾನರಾಗಿದ್ದ ತಿರುಮಲರಾವ್, ನಾರಾಯಣರಾವ್ ಅವರು 2.10.1782 ಬ್ರಿಟಿಷ್ ಅಧಿಕಾರಿಗಳಿಗೆ ಬರೆದ ಪತ್ರ – "Hyder Naik has usurped all our master's country and killed him and his two sons, putting their families in confinement. This is the way he has acted treacherously" (p. 28) ಸು. 1976 ರಲ್ಲಿ ಸೆರೆಯಲ್ಲಿಟ್ಟಿದ್ದ ಮಹಾರಾಣಿ ಲಕ್ಷ್ಮಮ್ಮಣ್ಣಿ ತಿರುಮಲರಾವ್‌ಗೆ ಬರೆದ ಕನ್ನಡ ಪತ್ರದ ಇಂಗ್ಲಿಷ್ ಅನುವಾದ ಇದು:

"We have been writing to you of our affairs from time to time. It is twenty two years since you have left this Kingdom. We are daily persecuted byTippu. We cannot say at what moment he may send assasins and get us murdered. For our sake 700 families of your kith and kin have been allowed to be ruthlessly murdered; All your immense wealth has been spent and you are a ruined person.... While we note the projects of the Mohammaden tyrant, we despair of our life. For we now learn that the French Vakil at the court of Tipu has been strongly advising him to put us all to death, as we may possibly one day be the cause of his ruin".

(ರುಜು 'ಶ್ರೀರಂಗ')

ಫೆಬ್ರವರಿ 1799ರಲ್ಲಿ (ಆ ವರ್ಷವೇ ಟಿಪ್ಪು ಸಾವನ್ನಪ್ಪಿದ್ದು) ಮಹಾರಾಣಿ ಲಕ್ಷ್ಮಮ್ಮಣ್ಣಿ ಬ್ರಿಟಿಷ್ ಅಧಿಕಾರಿಗಳಾದ ಮಾರ್ನಿಂಗ್ಟನ್ ಮತ್ತು ಕ್ಲೈವ್‌ರಿಗೆ ಬರೆದ ಕನ್ನಡದ ಪತ್ರ – "He (Tippu) plundered our palace several times and with the help of the wealth thereby acquired, conquered other countries and committed ravages throughout, slaying mercilessly and without cause ryots (ರೈತರು), Paligars (ಪಾಳೆಗಾರರು) and other persons by thousands......" ಟಿಪ್ಪು ರಾಜನನ್ನು ಕೊಂದು ತನ್ನನ್ನು ಬೇರೊಂದು ಮನೆಯಲ್ಲಿ ಸೆರೆಯಲ್ಲಿಸಿರುವುದಾಗಿ ಹೇಳಿದ್ದಾಳೆ. ಇಷ್ಟು "The Mysore Pradhanas" ಕೃತಿಯ ಕೆಲವು ಅಂಶಗಳು.

ಕ್ರಿ.ಶ. 1887ರಲ್ಲಿ ಚಾಮರಾಜೇಂದ್ರ ಒಡೆಯರರ ಕಾಲದಲ್ಲಿ ಎಂ. ಎ. ಕೆ. ಮತ್ತು ಎಂ.ಎಲ್.ಎನ್. ಬರೆದ "ಶ್ರೀ ಮನ್‌ಮ ಹಾರಾಜ ಚಾಮರಾಜೇಂದ್ರ ಒಡೆಯರ್ ರವರ ವಂಶ ರತ್ನಾಕರ" ಎಂಬ ಕೃತಿ ಟಿಪ್ಪು ಬಗ್ಗೆ ಸಾಕಷ್ಟು ಮಾಹಿತಿ ನೀಡುತ್ತದೆ. ಮತಾಂಧ ದರ್ಪಿಷ್ಟನಾಗಿ ಹಿಂದೂಗಳನ್ನು ಬಲವಂತವಾಗಿ ಇಸ್ಲಾಮಿಗೆ ಮತಾಂತರಿಸಿದ್ದನ್ನು, ಹಿಂದೂ ದೇವಾಲಯಗಳ ದತ್ತಿಗಳನ್ನು ವಶಪಡಿಸಿಕೊಂಡು ಅಲ್ಲಿಯ ವಿಗ್ರಹಗಳನ್ನು ಒಡೆದುಹಾಕಿದ್ದನ್ನು, "ಮನುಷ್ಯರಾದ ತನ್ನ ಸ್ವಜಾತಿ ಜನಗಳನ್ನೇ ಪ್ರಾಬಲ್ಯಕ್ಕೆ ತಂದ" ವಿಷಯವನ್ನು, ರಾಜರ ಪರವಾಗಿದ್ದ ಅಂಚೆ ಶಾಮಯ್ಯ, ಅವನ ತಮ್ಮ ರಂಗಯ್ಯನನ್ನು ಕಬ್ಬಿಣದ ಪಂಜರದಲ್ಲಿಟ್ಟು ಕೊಲ್ಲಿಸಿದಾಗ ಪ್ರಧಾನ್ ತಿರುಮಲರಾವ್ ತಪ್ಪಿಸಿಕೊಂಡು ಹೋಗಿ ಬ್ರಿಟಿಷರ ಆಶ್ರಯ ಪಡೆದುದನ್ನು ದಾಖಲಿಸಿದೆ. ವಿಧವೆ ರಾಣಿ ಲಕ್ಷ್ಮಮ್ಮಣ್ಣಿಯನ್ನು ಹತ್ತು ಅಂಕಣದ ಚಿಕ್ಕ ಮನೆಯಲ್ಲಿ ಸೆರೆಯಲ್ಲಿರಿಸಿ ಹನ್ನೆರಡು ಸೇವಕಿಯರನ್ನು ಅವಳಿಗೆ ಕೊಟ್ಟು ಉಳಿದ ಅರಮನೆ ಸೇವಕಿಯರುಗಳಲ್ಲಿ ("ಅವ್ವೇರು") ಕೆಲವರನ್ನು ಮತಾಂತರಗೊಳಿಸಿ ಇನ್ನೂ ಕೆಲವರನ್ನು ಮುಸ್ಲಿಮರ ಭೋಗಕ್ಕೆ ಒಪ್ಪಿಸಿದ. ಮಿಕ್ಕ ಅವ್ವೇರುಗಳಲ್ಲಿ ಕೆಲವರನ್ನು ಮತಾಂತರಗೊಳಿಸಿ ಕೆಲವರನ್ನು ತುರುಕರ ಜಾತಿಗೆ ಸೇರಿಸಿಕೊಂಡು ತನ್ನ ಉಗ್ರಾಣ, ಜಾನಸಾಲೆ (ಜಯನಶಾಲೆ = ಶಸ್ತ್ರಾಗಾರ) ಮುಂತಾದುವಕ್ಕೆ ಹಾಕಿಕೊಂಡನು. ಕೆಲವರನ್ನು ಅಕೃತ್ಯವಾದ ಕೆಲಸಕ್ಕೆ ಕೊಟ್ಟುಬಿಟ್ಟನು. ಅರಮನೆಯ ಹಲವು ಹಿಂದೂ ಮಹಿಳೆಯರನ್ನು ರಾಜನ ಆಪ್ತ ಜನರನ್ನು 'ಪರಾಶೀನರ ಕಡೆ ವಕೀಲ' ನ (ಪರ್ಷಿಯನ್ ವಕೀಲ) ಸೂಚನೆ ಮೇರೆಗೆ ಕೊಂದುಹಾಕಿದ.

ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪಕರಲ್ಲೊಬ್ಬರಾದ ಎಂ. ಶಾಮರಾಯರ **"ಮೈಸೂರು ಸಂಸ್ಥಾನದ ಚರಿತ್ರಸಾರ"** (1906) ಕೃತಿಯಿಂದ ಮಾಹಿತಿ ಇದು. ಟಿಪ್ಪು ಧೈರ್ಯಶಾಲಿ, ಆದರೆ ಅನ್ಯಮತದ್ವೇಷಿ, ಮತಾಂಧ. 1792ರಲ್ಲಿ ಕರಾವಳಿ, ಕೊಡಗು ಪ್ರದೇಶದ ಬಹು ಸಂಖ್ಯೆಯ ಗಂಡಸು ಹೆಂಗಸರನ್ನು ಹಿಡಿತರಿಸಿ ಮತಾಂತರ ಮಾಡಿ ಟಿಪ್ಪು ಪ್ರತಿ ಗ್ರಾಮದಲ್ಲಿ ಮಸೀದಿ ಕಟ್ಟಿಸಿದ. ಹೆಂಡ, ಸಾರಾಯಿ ಅಂಗಡಿಗಳನ್ನು ಅವನು ಮುಚ್ಚಿಸಿದ್ದರಿಂದ ಅವನ ಆದಾಯ ಕಡಿಮೆಯಾಗಿ, ಅದನ್ನು ಭರ್ತಿ ಮಾಡಲು ದೇವಾಲಯಗಳಿಗೆ ಕೊಡುತ್ತಿದ್ದ. 'ತಸ್ತೀಕನ್ನೆಲ್ಲಾ' (ಸರ್ಕಾರದಿಂದ ನೀಡುವ ಹಣ) ನಿಲ್ಲಿಸಿದ. ಶ್ರೀರಂಗಪಟ್ಟಣದ ರಂಗನಾಥಸ್ವಾಮಿ, ಗಂಗಾಧರೇಶ್ವರ ದೇವಾಲಯಗಳಿಗೆ ಮಾತ್ರ 'ತಸ್ತೀಕು' ದೊರಕುತ್ತಿತ್ತು. ಗ್ರಾಮ ಮಟ್ಟದ ಲೆಕ್ಕ ಪತ್ರಗಳು ಕನ್ನಡದಲ್ಲಿ, 'ತುಕ್ಕಡಿ' (ಜಿಲ್ಲೆ) ಮಟ್ಟದಲ್ಲಿ 'ಹಿಂದವಿ' (ಮರಾಠಿ), ರಾಜ್ಯ ಮಟ್ಟದಲ್ಲಿ ಪರ್ಷಿಯನ್ ಬಳಕೆಯಾಗುತ್ತಿತ್ತು. ಉನ್ನತ ಮಟ್ಟದ ಅಧಿಕಾರಿಗಳೆಲ್ಲ ಮುಸ್ಲಿಮರಾಗಿದ್ದರು. (ಮಂತ್ರಿಗಳು ಮಾತ್ರ ಕೆಲವರು ಹಿಂದೂಗಳು). ಆ ಮುಸ್ಲಿಮರು ಟಿಪ್ಪುವಿಗೆ ನಿಷ್ಠೆ ತೋರುವುದಕ್ಕೆ ಸಾಕ್ಷಿಯಾಗಿ ಕುರಾನನ್ನು ತಲೆ ಮೇಲೆ ಇಟ್ಟುಕೊಂಡು ಪ್ರಮಾಣ ಮಾಡಬೇಕಿತ್ತು. 'ಅಸೂಫ್' ಮುಂತಾದ ವರ್ಗದ ಉನ್ನತ ಮುಸ್ಲಿಂ ಅಧಿಕರಿಗಳೆಲ್ಲ ತಮ್ಮ ಸಂಸಾರ ಸಮೇತ ಶ್ರೀರಂಗಪಟ್ಟಣದಲ್ಲೇ ವಾಸಿಸುತಿದ್ದುದರಿಂದ ಟಿಪ್ಪುವಿಗೆ ಮೋಸ ಮಾಡಲು ಹೆದರುತ್ತಿದ್ದರು. ಕೆಲವರು ತಪ್ಪು ಮಾಡಿದ್ದು



ತಿಳಿದರೂ ಅವರು ಮುಸಲ್ಮಾನರೆಂಬ ಅಭಿಮಾನದಿಂದ ಅವರನ್ನು ಶಿಕ್ಷಿಸುತ್ತಿರಲಿಲ್ಲ. ಅವನ ಸಾವಿನ ಬಳಿಕ ಮೈಸೂರಲ್ಲಿ "ಹಿಂದೂ ರಾಜ್ಯವು ಪುನಃ ಸ್ಥಾಪಿತವಾಯಿತು". ಎಂದರೆ ಟಿಪ್ಪುವಿನದು 'ಮಹಮದೀಯ ರಾಜ್ಯ'.

ಮೇಲಿನ ಮಾಹಿತಿ ಟಿಪ್ಪು ನಂತರದ್ದಾದರೂ ಅದು ಕಠೋರ ವಾಸ್ತವವನ್ನೇ ಬಿಚ್ಚಿಡುತ್ತಿದೆ. ಟಿಪ್ಪು ಸಮಕಾಲೀನೆ ಮಹಾರಾಣಿ ಲಕ್ಷ್ಮಮ್ಮಣ್ಣಿಯವರ ಪತ್ರ ವ್ಯವಹಾರವು ಮಹಿಳೆಯೊಬ್ಬಳನ್ನು ಅದರಲ್ಲೂ ವಿಧವೆ ಮಹಾರಾಣಿಯನ್ನು ಕ್ರೌರ್ಯದಿಂದ ನಡೆಸಿಕೊಂಡ ಎಂಬುದನ್ನು ಬಿಚ್ಚಿಡುತ್ತದೆ. ಅವನು ಅಧಿಕಾರಿಗಳನ್ನು ನೇಮಿಸುವಲ್ಲಿ ಮುಸ್ಲಿಂ ಪಕ್ಷ ಜಾತಿ, ಅವರಿಗೆ ಶಿಕ್ಷೆ ಕೊಡುವುದರಲ್ಲೂ ಹಿಂದೇಟು ಹಾಕುತ್ತಿದ್ದ. ಅವನ ಪ್ರಮುಖ ಆಡಳಿತ ಭಾಷೆ ಪರ್ಷಿಯನ್ ಎಂಬುದೂ ಖಾತ್ರಿಯಾಗತ್ತದೆ.

## "ಜಂಗ್ ನಾಮಾ" ಕೃತಿಯಿಂದ

11.11.1891 ರಂದು ರಚಿತವಾಗಿರುವ "ಜಂಗ್ ನಾಮಾ" ಕನ್ನಡ ಕೃತಿಯಲ್ಲಿ (ಸಂ. ಎಸ್. ಎಲ್. ಶ್ರೀನಿವಾಸಮೂರ್ತಿ, ವಿ. ವಸಂತಶ್ರೀ – 2011) ಹೈದರ್, ಟಿಪ್ಪು ಚರಿತ್ರೆಯಿದ್ದು, ಟಿಪ್ಪು ಕಾಲದ ಕೆಲವು ಆಯ್ದ ಭಾಗಗಳನ್ನು ಹಾಗೆಯೇ ಇಲ್ಲಿ ನೀಡಲಾಗಿದೆ.

"ಜಶ ಜನಗಳಿಗೂ ಹಾಶಂ ಜನಗಳಿಗೂ (ಜಶ, ಹಾಶ ಜನ = ಆಫ್ರಿಕಾದಿಂದ ಬಂದ ಕರಾವಳಿ ಜನ?) ನವಾಯಿ ಯಾನೆ ಬಾಣ ಬಿಡುವ ಜನಗಳಿಗೆ ತೋಪುಗಳು ವುಡ್ಯಾಸುವ ಜನಗಳಿಗೂ ಮತ್ತು ಖಲಾಶಿ ವಗೈರೆ ಛಿ ಫಿರಕೆ ವಾರ ಜನಗಳನ್ನು ಕರಶಿ ನೋಡಿದಲ್ಲದೆ ಸವಾರಗಳ ಚರಾಯಿಗೋಸ್ಕರ ಅಲ್ಲಲ್ಲಿ ರವಾನೆ ಮಾಡಿದ್ದಲ್ಲದೆ ಇನ್ನು ಹೊಸದಾಗಿ ಸವಾರಗಳಿಗೂ ತೋಫ ಬಾರುತ್ತ ಜಮಾಯಿಸುವ್ರುದಕ್ಕೆ ಅಪ್ಪಣೆ ಮಾಡಿದರು ಮತ್ತು ಪ್ರತಿದಿನ ಫವುಜನ ಭರ್ತಿ ಸೀಮೆ ಬಂದೋಬಸ್ತ ಕೆಲಸಗಳಲ್ಲಿಯಿದ್ದರು ಕೊಡಗ ಮತ್ತು ಕೊಡಗಿ ಜನಗಳಿಗೂ ಅವರ ಕುಟುಂಬ ಮಕ್ಕಳು ಸಮೇತ ಮತ್ತು ಕ್ರಿಸ್ತಾಂಗ ಜನಗಳಿಗೂ ಮತ್ತು ನಾಯರ ಜನಗಳಿಗೂ ಅವರ ಕುಟುಂಬ ಮಕ್ಕಳು ಸಮೇತ ಹಿಡಿದು ಮುಸಲ್ಮಾನರ ಮತಕ್ಕೆ ಸೇರಿಸಿದ್ದು ಆಗ ಸುಲ್ತಾನ್‌ರವರು ತಮ್ಮ ಫೌಜು ಸಂಗಡ ಕರೆದುಕೊಂಡು ಯರಡು ಮೂರು ತುಕ್ಕಡಿಗಳು ಮಾಡಿ ಕೊಡಗು ದೇಶದಲ್ಲಿ ಎರಡು ಮೂರು ಕಡೆ ಇಂದು ಪ್ರವೇಶ ಮಾಡಿದರು... ತಾವು (ಟಿಪ್ಪು) ಕೊಡಗು ಶೀಮಾ ಬಂದೋಬಸ್ತು ಮಾಡಿ ಪಟ್ಟಣಕ್ಕೆ (ಶ್ರೀರಂಗಪಟ್ಟಣಕ್ಕೆ) ಬಂದು ತಲ್ಲಿಪಿದರು. ಆ ಎರಡು ಮತಸ್ಥರ (ಹಿಂದೂ ಮತ್ತು ಕ್ರಿಶ್ಚಿಯನ್) ಹೆಂಗಸರು ಮಕ್ಕಳು ಸುಮಾರು ಐವತ್ತು ಸಾವಿರ ಜನದವರಿಗೂ ಜಮ ಆದರು. ಆಗ ಆ ಎಲ್ಲ ಜನಗಳಿಗೂ ಕಕಲಮ ಶಾಸ್ತ್ರವ್ರೋದಿಶಿ (ಕಕಲಮಶಾಸ್ತ್ರ = ಕಲಂ ಶಾಸ್ತ್ರ, = ಬರಹದ ವಿದ್ಯೆ, ಕೊರಾನ್?) ವಂದೇ ದಿವ್ಸದಲ್ಲಿ ಮುಂಜಿ ಮಾಡ್ಸಿ (=ಶಿಶ್ನಚ್ಛೇದ ಮಾಡಿಸಿ) ಮುಸಲ್ಮಾನರ ಮಥಕ್ಕೆ ಸೇರಿಸಿದರು...

(ಅವರಿಗೆಲ್ಲ) ಒಳ್ಳೇ ಮೇಷ್ಟರುಗಳನ್ನು ಇಟ್ಟು ಹೆಂಗಸರು ಮಕ್ಕಳನ್ನು ಸಹ ಮಥದ ಶಾಸ್ತ್ರ ಖುರಾನು ವೋಧಿಸಿದ್ದಲ್ಲದೆ ಕೆಲವು ಜನಗಳಿಗೆ ಹಿಂದ್ವಿ ಫಾರಶಿ ಕನ್ನಡ ವಿದ್ಯಾ ಅಭ್ಯಾಸ ಮಾಡಿದರು. .......... ಮುಸಲ್ಮಾನ ಮತಕ್ಕೆ ಸೇರುವುದಾದರೆ ಪ್ರತಿ ಮನುಷ್ಯಗೆ ಐವತ್ತು ರೂಪಾಯಿ ಕೊಟ್ಟ". (ಪು.93 – 4)

ಟಿಪ್ಪು ಕೊಡಗು ಪ್ರದೇಶದ ಹಿಂದೂ, ಕ್ರಿಶ್ಚಿಯನ್ ಗಂಡಸರು, ಹೆಂಗಸರು, ಮಕ್ಕಳನ್ನು ಶ್ರೀರಂಗಪಟ್ಟಣಕ್ಕೆ ತಂದು ಅವರನ್ನು ಮತಾಂತರಿಸಿದ ಎಂದು ಈಚಿನ ಕೃತಿಯಾದರೂ ಹಿಂದಿನ ಸತ್ಯ ಸಂಗತಿಯನ್ನೇ ಹೇಳುತ್ತದೆ. ಅವರಿಗೆ ಕುರಾನ್ ಹೇಳಿಕೊಟ್ಟ. ಹಿಂದ್ವಿ (ಮರಾಠಿ), ಫಾರ್ಸಿ, ಕನ್ನಡ ವಿದ್ಯೆಗೆ ಏರ್ಪಾಟು ಮಾಡಿದ ಮತ್ತು ಮತಾಂತರಗೊಂಡ ಎಲ್ಲರಿಗೂ ತಲಾ ಐವತ್ತು ರೂಪಾಯಿಗಳನ್ನು ಖಾಜಿಗಳ ಸಮ್ಮುಖದಲ್ಲಿ ನೀಡಿದ; ಯಾರಿಗಾದರೂ ಸಾಲ ಇದ್ದರೆ ಅದನ್ನು ವಜಾ ಮಾಡಿದ.

'ಜಂಗ್‌ನಾಮಾ' ಬರೆದವನು ಫಾರ್ಸಿ ಮನೆ ಮಾತಿನ, ಕನ್ನಡವನ್ನೂ ಬಲ್ಲ ಒಬ್ಬ ಮುಸ್ಲಿಂ ಇರಬೇಕು. ಆ ಕೃತಿಯಲ್ಲಿ ಹಲವೆಡೆ ಮತಾಂತರಗಳ ಮಾತು ಉತ್ಸಾಹದಿಂದ ನಿರೂಪಿತವಾಗಿದೆ. ಇದು ಈಚಿನ ಕೃತಿಯಾದರೂ ಕೆಲವು ಐತಿಹಾಸಿಕ ಹೊಸ ವಿಷಯಗಳನ್ನೂ ಒಳಗೊಂಡಿದೆ.

ಜಿ. ರಿಜ್ಜೆರನ ಕೃತಿ "(**"Coorg" Indin Gazetteer - 1870**)) ಕೃತಿಯಲ್ಲಿನ ಮಾಹಿತಿ ಇದು – "ದೊಡ್ಡಪ್ಪರಾಜ ಎಂಬ ಕೊಡಗು ವಂಶದ ಹೊಸಮಲೆ ಶಾಖೆಯ ರಾಜನು ದುರದೃಷ್ಟವಶಾತ್ ಹೈದರನ ಸೈನಿಕರಿಗೆ ಸೆರೆ ಸಿಕ್ಕಿ ಅವನನ್ನು, ಆಗಲೇ ಸೆರೆಯಲ್ಲಿದ್ದ ಅವನ ಕುಟುಂಬ ವರ್ಗವನ್ನು ಶ್ರೀರಂಗಪಟ್ಟಣಕ್ಕೆ ಕರೆದೊಯ್ದು ಎಲ್ಲರನ್ನೂ ಒಟ್ಟಿಗೆ ಕೊಲೆ ಮಾಡಲಾಯ್ತು. ಮುಂದೆ ಟಿಪ್ಪುವು ಸೈನ್ಯ ಸಮೇತ ಕೊಡಗನ್ನು ಪ್ರವೇಶಿಸಿ 1785 ರಲ್ಲಿ ತಲಕಾವೇರಿಯ ಹಲವು ಕೊಡವರಿಗೆ ಆಮಿಷ ತೋರಿ ರಕ್ಷಣೆಯ ನೆಪವೊಡ್ಡಿ ಇದ್ದಕ್ಕಿದ್ದಂತೆ ಅವರನ್ನು ಬಂಧಿಸಿ 35000 ಜನರನ್ನು ಶ್ರೀರಂಗಪಟ್ಟಣಕ್ಕೆ ಒಯ್ದು ಅವರ ಶಿಶ್ನಚ್ಛೇದ ಮಾಡಿಸಿ, ಅದೇ ಪವಿತ್ರ ದಿನ ಅವರನ್ನೆಲ್ಲ ಇಸ್ಲಾಮಿಗೆ ಸೇರಿಸಿ ತಾನು ದೆಹಲಿಯ ಆಡಳಿತದಿಂದ ಸ್ವತಂತ್ರನಾದ ರಾಜನೆಂದು ಘೋಷಿಸಿಕೊಂಡ. ಜನ ಬಾಹುಲ್ಯ ವಿಹೀನವಾದ ಕೊಡಗಿಗೆ ಮುಸಲ್ಮಾನ್ ಜಮೀನುದಾರರನ್ನು ಕಳುಹಿಸಿ ಅಲ್ಲಿ ಜಮೀನುಗಳನ್ನು ನೀಡಿ ಹೊರಹಾಕಿದ್ದ ಸ್ಥಳೀಯರನ್ನು ಗುಲಾಮರನ್ನಾಗಿ ಅವರಿಗೆ ನೀಡಿದ. ಹಾಗೆಯೇ ಆ ಮುಸಲ್ಮಾನ್ ಜಮೀನುದಾರರಿಗೆ ಆದ್ವಾನಿಯ (ಹಿಂದೆ ಬಳ್ಳಾರಿ ಜಿಲ್ಲೆ; ಈಗ ಆಂಧ್ರಪ್ರದೇಶ) ಕೂಲಿಕಾರರನ್ನು ಕೊಟ್ಟು ಅವರನ್ನು ಶಿಶ್ನಚ್ಛೇದ ಮಾಡಿ ಮತಾಂತರಿಸಿದ. ಆ ಮುಸಲ್ಮಾನ್ ಜಮೀನುದಾರರಿಗೆ ತಪ್ಪಿಸಿಕೊಂಡಿದ್ದ. ಬೆಟ್ಟಗುಡ್ಡಗಳ ನಿವಾಸಿ ಕೊಡವರನ್ನು ಹುಡುಕಿ ತರಿಸಿ ಅವರೆಲ್ಲರನ್ನೂ ಕೊಂದು ಅವರ ಹೆಂಡಿರು ಮಕ್ಕಳನ್ನು ಗುಲಾಮರನ್ನಾಗಿ ಮಾಡಿಕೊಳ್ಳಲು ಆದೇಶಿಸಿದ. ಆ ಸಮಯದಲ್ಲೇ ನಾಗಪ್ಪಯ್ಯ ಎಂಬಾತನನ್ನು ಗಲ್ಲಿಗೇರಿಸಲು



ಆದೇಶಿಸಿದ" (ಪು 247–8). ಟಿಪ್ಪುವಿನ ದಳಪತಿಗಳಲ್ಲಿ ಒಬ್ಬನ ಹೆಸರು "ಬೆಂಕಿ ನವಾಬ್" (ಪು . 265)

**ಬಿ.ಎಲ್. ರೈಸರ Mysore and Coorg (1878) ಕೃತಿಯಿಂದ** (ಪು. 110–11): "ವಿಲ್ಕ್ಸ್ ಹೇಳುವ ಪ್ರಕಾರ, ಟಿಪ್ಪುವು ಆವೇಶಪೂರಿತ ಉಚ್ಚ ಕಂಠದಲ್ಲಿ ಕೊಡವರಿಗೆ ಅವರ ನೈತಿಕ, ರಾಜಕೀಯ ಪಾಪಗಳನ್ನು ಈ ಮಾತುಗಳ ಮೂಲಕ ತಿಳಿಸಿದ. ಆರು ಜನ ಸೋದರರು ಒಂದು ಮನೆಯಲ್ಲಿ ಒಟ್ಟಿಗೆ ಬದುಕುತ್ತಿದ್ದರೆ, ಅವರಲ್ಲಿ ಹಿರಿಯನಿಗೆ ಮದುವೆಯಾದರೆ ಅವನ ಹೆಂಡತಿಯು ಉಳಿದ ಐವರು ತಮ್ಮಂದಿರಿಗೂ ಹೆಂಡತಿಯಾಗಿ ಪರಿಣಮಿಸುತ್ತಾಳೆ. ಅಂತಹ ಸಂಬಂಧ ಇಲ್ಲಿಯವರೆಗೆ ಪಾಪ, ಅಪಮಾನಕಾರಿಯಾಗಿದ್ದು ಎಂದು ಭಾವಿಸಲಾಗಿದ್ದು ಈಗ ಅದು ತಮ್ಮಂದಿರ ಒಂದು ರಾಷ್ಟ್ರೀಯ ಹಕ್ಕಾಗಿದೆ. ಈ ದೇಶದಲ್ಲಿ ಯಾವ ಮನುಷ್ಯನಿಗೂ ತನ್ನ ತಂದೆ ಯಾರು? ಎಂಬುದು ತಿಳಿದಿಲ್ಲ ಮತ್ತು ಪತ್ನಿಯರಿಗೆ ದೊರಕುವ ಬಹು ಜನ ಗಂಡಸರ ಜೊತೆ ಸಂಬಂಧ ಬೆಳಸುವ ಹಕ್ಕನ್ನು ನಾನು ರದ್ದುಮಾಡುತ್ತೇನೆ, ಇದು ನಿಮ್ಮೆಲ್ಲರ ಮುಂದಿನ ಜೀವನ ವಿಧಾನ. ನನ್ನ ತಂದೆ ನಿಮ್ಮ ನಾಡನ್ನು (ಕೊಡಗು) ಗೆದ್ದ ಮೇಲೆ ಹಲವು ಬಾರಿ ನೀವು ದಂಗೆ ಎದ್ದಿದ್ದೀರಿ ಮತ್ತು ನಮ್ಮ ಸಾವಿರಾರು ಸೈನಿಕರನ್ನು ಕೊಂದಿದ್ದೀರಿ. ಈಗ ನಿಮ್ಮನ್ನು ಕ್ಷಮಿಸಿದ್ದೇನೆ. ನೀವೇನಾದರೂ ದಂಗೆ ಎದ್ದರೆ ನಾನು ಅಲ್ಲಾನ ಮುಂದೆ ಪ್ರತಿಜ್ಞೆ ಮಾಡಿದ್ದೇನೆ – ನಿಮ್ಮ ನಾಡಿನ ಎಲ್ಲರಿಗೂ ಇಸ್ಲಾಮನ್ನು ನೀಡಿ ಗೌರವಿಸುತ್ತೇನೆ, ನಿಮ್ಮನ್ನು ನಿಮ್ಮ ಮನೆ ಊರುಗಳಿಂದ ದೂರದ ಊರುಗಳಿಗೆ ಓಡಿಸುತ್ತೇನೆ ಮತ್ತು ಹಾಗೆಯೇ ದಂಗೆಯನ್ನು ಶಾಂತಗೊಳಿಸದಿದ್ದರೆ, ಹೆಂಗಸರ ಬಹುಪತಿತ್ವದ ಹಕ್ಕನ್ನು ತೆಗೆದು ಹಾಕಿ. ನೀವೆಲ್ಲ ಇಸ್ಲಾಂ ಪದ್ಧತಿಯನ್ನು ಅನುಸರಿಸುವಂತೆ ಮಾಡುತ್ತೇನೆ" (ಪು. 110–1). "ಇಸ್ಲಾಂ ಪದ್ಧತಿ" ಎಂದರೆ ಬಹುಪತ್ನಿತ್ವ. ಟಿಪ್ಪು ಗಂಡಸು ಕೊಡವರನ್ನು, ನಿಮ್ಮ ಪತ್ನಿಯರು ಏಕ ಪತಿತ್ವವುಳ್ಳವರಾಗಲು ನೀವು (ಪುರುಷರು) ಬಹುಪತ್ನಿತ್ವರಾಗಲು ಆದೇಶಿಸುತ್ತೇನೆ ಎಂದು ಹೆದರಿಸುತ್ತಾನೆ. ಇದು ಬಹು ಘೋರ ಆದೇಶ. ಅವನು ಹಾಗೆ ಹೆದರಿಸಿದರೂ ಟಿಪ್ಪು ಕೊಡಗಿನಿಂದ ಹೊರಗೆ ಹೋದ ಮೇಲೆ ಕೊಡವರು ಪ್ರತೀಕಾರಾತ್ಮಕವಾಗಿ ಆಯುಧ ಹಿಡಿದು ತಮ್ಮ ಪರ್ವತ ಪ್ರದೇಶವನ್ನು 1785ರಲ್ಲಿ ತಮ್ಮ ವಶಕ್ಕೆ ತೆಗೆದುಕೊಂಡರು. ಅವರ ದಂಗೆಯನ್ನು ದಮನ ಮಾಡಲು ಟಿಪ್ಪು ಸೈನ್ ಉಲ್ ಅಬಿ ಉದ್ದೀನ್ ನೇತೃತ್ವದ 15000 ಸೈನಿಕರ ತಂಡವನ್ನು ಕಳುಹಿಸಿದ. ಮೂಡುಗೆರೆ ನಾಡಲ್ಲಿ 4000 ಕೊಡವರು ಆ ಸೈನ್ಯವನ್ನು ಎದುರಿಸಿದರು. ಕೊಡವರ ಸೈನ್ಯ ಟಿಪ್ಪು ಸೈನ್ಯವನ್ನು ಹಿಮ್ಮೆಟ್ಟಿಸಿತು. ಆಗ ಸ್ವತಃ ಟಿಪ್ಪುವೇ ನೇತೃತ್ವ ವಹಿಸಿ,ತನ್ನ ಸೇನೆಯೊಡನೆ ಕೊಡಗು ಪ್ರವೇಶಿಸಿ ಹೆಚ್ಚು ನಷ್ಟವಿಲ್ಲದೆ ಮಡಿಕೇರಿಗೆ ಹೋಗಿ ಒಪ್ಪಂದ ಮಾಡಿಕೊಂಡ. ಶಾಂತಿ ಸಂಧಾನದ ನಟನೆ ಮಾಡಿ ಅವನು ತಲಕಾವೇರಿಯ ಕೊಡವರಿಗೆ ಆಮಿಷ ಒಡ್ಡಿದಾಗ ಅವರೆಲ್ಲ ತಾವಿನ್ನು ಸುರಕ್ಷಿತವೆಂದು ಭಾವಿಸುತ್ತಿದ್ದಂತೆ ಟಿಪ್ಪು ಇದ್ದಕ್ಕಿದ್ದಂತೆ ಅವರ ಕುಟುಂಬಗಳ ಸಮೇತ ಎಲ್ಲರನ್ನೂ ಎಂದರೆ ಸಾವಿರಾರು ಜನರನ್ನು ಸೆರೆ ಹಿಡಿದು ಶ್ರೀರಂಗಪಟ್ಟಣಕ್ಕೆ

ಕೊಂಡು ಹೋಗಿ ಅವರಿಗೆ ಬಲವಂತವಾಗಿ ಶಿಶ್ನಚ್ಛೇದ ಮಾಡಿಸಿದ. ಅಂತಹ ದೊಡ್ಡ ಸಂಖ್ಯೆಯ ಜನರನ್ನು ಇಸ್ಲಾಮಿಗೆ ಮತಾಂತರಗೊಳಿಸಿ ತಾನು ಕೊಡಗಿನ ರಾಜ ಎಂದು ಘೋಷಿಸಿಕೊಂಡು ತಾನು ದೆಹಲಿಯಿಂದ ಬೇರೆಯಾಗಿ ಸ್ವತಂತ್ರನಾದೆ ಎಂದು ಘೋಷಿಸಿಕೊಂಡ. ಹೀಗೆ ನಿರ್ಜನವಾದ ಕೊಡಗಿಗೆ ಮುಸಲ್ಮಾನ್ ಜಮೀನುದಾರರನ್ನು ಕಳುಹಿಸಿ ಭೂಮಿ ಮತ್ತು ಮುಸಲ್ಮಾನರಾಗಿ ಮತಾಂತರಗೊಂಡ ಸೇವಕರನ್ನು ಉಚಿತವಾಗಿ ನೀಡಿದ. ......"(ಪು. 109–111).

**ಕೊಡಗು ಜಿಲ್ಲೆ ಕನ್ನಡ ಗೆಜೆಟಿಯರ**ಲ್ಲಿನ ಮಾಹಿತಿ ಪ್ರಕಾರ, ಮಡಕೇರಿ ಗೆದ್ದ ಟಿಪ್ಪು 1785ರಲ್ಲಿ ಅದಕ್ಕೆ 'ಜಾಫರಾಬಾದ್" ಹೆಸರಿಟ್ಟ; ಭಾಗಮಂಡಲದ ಭಗಂಡೇಶ್ವರ ದೇವಾಲಯವು ಕೋಟೆಯಾಗಿ ಪರಿಣಮಿಸಿ ಅದಕ್ಕೆ 'ಅಬ್ಜಲಾಬಾದ್' ಹೆಸರಿಟ್ಟ. ಟಿಪ್ಪುವು ಕೊಡಗಿನ ರಾಜವಂಶದ ಮೂರು ಕನ್ಯೆಯರನ್ನು ಬಂಧಿಸಿ ಅವರಲ್ಲಿ ಇಬ್ಬರನ್ನು ತನ್ನ 'ಜನಾನಾ'ಕ್ಕೆ (ಅಂತಃಪುರ) ಸೇರಿಸಿದ್ದ – ಆ ಇಬ್ಬರು ರಾಜಕುವರಿ ದೇವಮ್ಮಾಜಿ, ನೀಲಮ್ಮಾಜಿಯರಿಗೆ 'ಮೆಹ್ತಾಬ್', 'ಅಫ್ತಾಬ್' ಎಂಬ ಮುಸ್ಲಿಂ ಹೆಸರುಗಳನ್ನಿಟ್ಟು ಅವರನ್ನು ಮದುವೆಯಾದ. ಮುಂದೆ 1799 ರಲ್ಲಿ ಟಿಪ್ಪು ಹತನಾದಾಗ ಕೊಡಗಿನ ದೊರೆ ವೀರರಾಜೇಂದ್ರನು ಬ್ರಿಟಿಷ್ ಅಧಿಕಾರಿ ಹ್ಯಾರಿಸ್‌ಗೆ 'ರಾಜೇಂದ್ರನಾಮೆ' ಪ್ರಕಾರ, ಪತ್ರ ಬರೆದು ಈ ವಿಷಯ ತಿಳಿಸಿದ್ದಾನೆ – "ಟಿಪ್ಪು ಸುಲ್ತಾನರು ನಮಗೆ ಬಹಳ ದೊಡ್ಡ ದುಷ್ಮಾನರಾಗಿ ಇದ್ದರು. ಹಿಂದು ಜಾತಿ ಧರ್ಮವೆಲ್ಲಾ ಕೆಡಿಸಿ ಧರ್ಮ ನಡೆಯದಂತೆ ಮಾಡಿದ್ದರು. ಅಂಥವರಿಗೆ ನಿಗ್ರಹಿಸಿದ್ದರಿಂದ ಹಿಂದು ಜಾತಿಗೆಲ್ಲಾ ಖುಷಿಯಾಯಿತು. ತಮ್ಮ ಸರಕಾರಕ್ಕೆ ಬಹಳ ಪುಣ್ಯ ಬಂತು." (ಪು. 90–3).

ಮೈಸೂರು ಜಿಲ್ಲೆಯ ದಕ್ಷಿಣದಲ್ಲಿರುವ ನೀಲಗಿರಿ ಪರ್ವತಪ್ರದೇಶದ ನಿವಾಸಿಗಳಾದ ಬಡಗರು ಇಂದಿಗೂ ಒಂದು ಬಗೆಯ ಕನ್ನಡವನ್ನೇ ಮಾತನಾಡುತ್ತಾರೆ – ಅದೇ ಬಡಗಭಾಷೆ. ಅವರು ಇಂದಿಗೂ ತಾವು ಮೈಸೂರು ಪ್ರದೇಶದಿಂದ ಅನೇಕ ವರ್ಷಗಳಿಗೆ ಹಿಂದೆ ಅಲ್ಲಿ ಟಿಪ್ಪುವಿನ ಕ್ರೌರ್ಯ, ಮತಾಂತರ ಸಹಿಸಲಾರದೆ ಓಡಿ ಬಂದವರು ಎಂದೇ ಹೇಳಿಕೊಳ್ಳುತ್ತಾರೆ. ನೀಲಗಿರಿ ಜಿಲ್ಲೆಗೆ ಮೈಸೂರು 'ಬಡಗ' (=ಉತ್ತರ) ದಿಕ್ಕಿನಲ್ಲಿದೆ. ನೀಲಗಿರಿ ಪರ್ವತದ ದಕ್ಷಿಣದ ಕೊಯಮತ್ತೂರು ಪ್ರದೇಶದ ಹಲವು ಕನ್ನಡಿಗರೂ ಅದೇ ವಿಷಯವನ್ನು ಇಂದಿಗೂ ಜ್ಞಾಪಿಸಿಕೊಳ್ಳುತಾರೆ – ಈ ಸಂಗತಿಯನ್ನು ಹಲವರ ಬಾಯಿಂದ ಕೇಳಿರುವುದಲ್ಲದೆ ನಾನೇ ನೀಲಗಿರಿಗೆ ಹೋದಾಗ ಪ್ರತ್ಯಕ್ಷವಾಗಿ ಅಲ್ಲಿಯ ನಿವಾಸಿಗಳ ಬಾಯಿಂದ ಕೇಳಿದ್ದೇನೆ.

**ಆರ್. ಗೋಪಾಲ್ ಅವರ "ದಿವಾನ್ ಪೂರ್ಣಯ್ಯ"** (2008) ಕೃತಿಯಲ್ಲಿ ದಾಖಲಾಗಿರುವಂತೆ ಟಿಪ್ಪು ಕಾಲದಲ್ಲಿ ಮುಸ್ಲಿಂ ಸೈನಿಕರು ಶ್ರೀವೈಷ್ಣವರ ನಾಮ ನೆಕ್ಕಿ ಅವರನ್ನು ಜಾತಿಭ್ರಷ್ಟರನ್ನಾಗಿ ಮಾಡುತ್ತಿದ್ದರು. ಅದರಿಂದ ಅವರನ್ನು ಇಸ್ಲಾಮಿಗೆ ಮತಾಂತರಿಸಲು ಸುಲಭವಾಗುತ್ತಿತ್ತು. (ದಿವಾನ್ ಪೂರ್ಣಯ್ಯ ಮರಾಠಿ ಮನೆ ಮಾತಿನ ಮಾಧ್ವ ಬ್ರಾಹ್ಮಣ – ಅವರು ಹುಟ್ಟಿದ್ದು ತಮಿಳುನಾಡಲ್ಲಿ) ಎನ್.ಕೆ.ನರಸಿಂಹಮೂರ್ತಿಯವರ (Purnaiah)



(1976) ಕೃತಿಯಲ್ಲಿನ ಮಾಹಿತಿ ಇದು – "While Hyder's views were progressive and contributed to the economic, sources, the outlook of the fanatically disposed son was thoroughly retrogade and his hatred of other communities, together with his indiscriminate selection of office for both the civil and military administration spread universal disaffection in the country and the inefficient management of state affairs finally ended in his utter destruction" (ಎಂದರೆ ಆಡಳಿತದ ಸೈನ್ಯದ ಪ್ರಮುಖ ಹುದ್ದೆಗಳಿಗೆ ಅವನು ಮುಸ್ಲಿಮರನ್ನೇ ಆರಿಸಿದ್ದು ಮತ್ತು ಇಸ್ಲಾಂ ಮತಾಂಧತೆ ಮತ್ತು ಅನ್ಯ ಧರ್ಮ ದ್ವೇಷ ಅವನ ಮತ್ತು ಅವನ ಆಡಳಿತದ ನಾಶಕ್ಕೆ ಕಾರಣವಾಯಿತು. ಪು. 40). ಅಲ್ಲಿಯ ಇನ್ನೂ ಕೆಲವು ವಾಕ್ಯಗಳು ಇವು – "As the Sultan had an aversion to Brahmins, Hindus and other tribes, he did not consider any but the people of Islam as his friends and therefore the chief object was to promote and to provide for them. Accordingly he selected a number of Mussalmans who could scarcely read and write and appointed men, Mirzas of the Treasury departments and one over each of the other accounts, to the end that the accounts may be submitted by them to him in the Persian language and in the extent of his dominions paragana (ಜಿಲ್ಲೆ) was placed, by his orders, an Asof and in towns yielding a venue of 5000 Hanas or pagodas, one Amildar (or collector), one Sirastedar, one Ameen and one Mymoodan, all Musalmans". ದೇಶ್‌ಮುಖ್, ದೇಶಪಾಂಡೆ, ಕನುಗೋ ಅಧಿಕಾರಿಗಳನ್ನು ಕಿತ್ತೊಗೆದ. ಆದರೂ ಹಿಂದೂ ಅಧಿಕಾರಿಗಳಿಗೆ ಲೆಕ್ಕಪತ್ರ ಚೆನ್ನಾಗಿ ಗೊತ್ತಿದ್ದುದರಿಂದ ಅವನ ಮುಸ್ಲಿಂ ಅಧಿಕಾರಿಗಳು ಅವರಿಂದ ಗುಟ್ಟಾಗಿ ಸಹಾಯ ಪಡೆಯುತ್ತಿದ್ದರು. ಬ್ರಾಹ್ಮಣರನ್ನು ಅವಲಂಬಿಸಿದ ಮುಸ್ಲಿಂ ಅಧಿಕಾರಿಗಳು ತಮ್ಮ ಕಚೇರಿಗಳಿಂದ ದೂರ ಉಳಿದು ಹಗಲು ರಾತ್ರಿ ಕುಣಿತ ಭೋಜನ ಇತ್ಯಾದಿ ಸುಖಗಳಲ್ಲಿ ಕಾಲಕಳೆಯುತ್ತಿದ್ದರು. ಇದರಿಂದ ದೇಶದ ಆದಾಯ ಕಡಮೆ ಆಗಿ ರಾಜ್ಯ ದುರ್ಬಲವಾಯಿತು. ಖಾನರು ಮತ್ತು ಇತರ ಅಧಿಕಾರಿಗಳು ಮೋಸ ಮಾಡುತ್ತ ಪ್ರಬಲರಾದರು. ಅವರಲ್ಲಿ ಅಮೀರ್ (ಮೀರ್ ಸಾದಕ್) ರಾಜನಿಂದ ಸಾಕಷ್ಟು ಅನುಕೂಲ ಪಡೆದಿದ್ದರಿಂದ ಕ್ರಮೇಣ ಪ್ರಬಲನಾದ. ಅವನ ಕೈಗೆ ಆಡಳಿತ ಸೂತ್ರಗಳು ಹೆಚ್ಚಾಗಿ ಹಸ್ತಾಂತರಗೊಂಡುವು. ಅವನು ಕುರಾನ್ ಇತ್ಯಾದಿ ಮುಸ್ಲಿಂ ಧರ್ಮ ಗ್ರಂಥಗಳನ್ನು ಪಠಿಸುತ್ತ ಟಿಪ್ಪುಗೆ ಪ್ರಿಯನಾದ. ಟಿಪ್ಪುಗೆ ಅವನ ದುರ್ಬುದ್ಧಿ ಗೊತ್ತಾದರೂ ಅವನು ಅವನ ಕೋಪವನ್ನು ಜಾಣ್ಮೆಯಿಂದ ತಣ್ಣಗಾಗಿಸಿದನು. ಮುಸ್ಲಿಂ ಚರಿತ್ರಕಾರ ಕಿರ್ಮಾನಿಯು ಪೂರ್ಣಯ್ಯನವರಿಂದ ಟಿಪ್ಪುವಿನ "ಖುದಾ‌ಬಾದ್" (ದೇವರ ರಾಜ್ಯ) ರಾಜ್ಯ ದುರ್ಬಲವಾಯಿತು ಎಂದು ಹೇಳಿದರೂ ವಾಸ್ತವವಾಗಿ ಬ್ರಾಹ್ಮಣರನ್ನು

ಉದಾಸೀನ ಮಾಡಿದ್ದು ಟಿಪ್ಪು ರಾಜ್ಯ ದುರ್ಬಲವಾಗಲು ಕಾರಣ. ಪೂರ್ಣಯ್ಯನವರು ಕೊನೆಯವರೆಗೂ ಟಿಪ್ಪುವಿಗೆ ಸಂಪೂರ್ಣ ನಿಷ್ಠರಾಗಿದ್ದರು. ಟಿಪ್ಪು ದುರ್ಬಲ ಮನಸ್ಸಿನ ಮುಸ್ಲಿಮರನ್ನು ನೇಮಕ ಮಾಡಿದ್ದವರೆಲ್ಲಾ ಒಳಗೇ ದಿವಾನ್ ಸಾಹೇಬ ಅಥವಾ ಮೀರ್ ಸಾದಕನಿಗೆ ನಿಷ್ಠರಾಗಿದ್ದರು. ಮೀರ್ ಸಾದಕ್ ತನ್ನ ಯಜಮಾನನ ರಾಜ್ಯ ಪತನಕ್ಕೆ ಗುಟ್ಟಾಗಿ ಯೋಜನೆ ರೂಪಿಸಿದ್ದ. ಕೊನೆಯವರೆಗೂ ಟಿಪ್ಪು ನಿಷ್ಠೆ ಉಳಿಸಿ ಕೊಂಡಿದ್ದವರು ದಿವಾನ್ ಪೂರ್ಣಯ್ಯ. ಟಿಪ್ಪು ಮಡಿದ ಮೇಲೆ ಯಾರೂ ಪೂರ್ಣಯ್ಯನವರನ್ನು ದೂಷಿಸಲಿಲ್ಲ; ಮುಸ್ಲಿಮರೂ ದಂಗೆ ಏಳಲಿಲ್ಲ. (ಅವರಿಗೆಲ್ಲ ಬ್ರಿಟಿಷರ ಶಕ್ತಿ ಸ್ಪಷ್ಟವಾಗಿತ್ತು). ನರಗುಂದದ ಮೇಲೆ ಟಿಪ್ಪು ಧಾಳಿ ನಡೆಸಿದಾಗ ಟಿಪ್ಪು ತನ್ನ ದಳವಾಯಿಗೆ ಬರೆದ ಪತ್ರ – "In the event of your being oblized to assault the place, every living creature, whether man or woman, old or young eat dog or anything else, must be put to the sword, with the single exception Okala Pandit (the commander)". ಕಲಾಪಂಡಿತನನ್ನು ಕೊಲ್ಲದಿರಲು ಕಾರಣವೇನೆಂದರೆ ಅವನನ್ನು ಸೆರೆ ಹಿಡಿದು ಹಿಂಸಿಸಿ ಕೊಂದು ಅವನ ಮಗಳನ್ನು ತನ್ನ ಜನಾನಾಕ್ಕೆ (ಅಂತಃಪುರ) ಸೇರಿಸಲು ಬಯಸಿದ್ದ. ಬೌರಿಂಗ್ (ಮೈಸೂರಿನ ಮಾಜಿ ಕಮೀಷನರ್) ಹೇಳುತ್ತಾನೆ – "He rivalled Mohammed of Ghazni, Nadir Shah and Alauddin, the Patnam Emperor of Delhi surnamed the Khunni or the Bloody, all of whom were famous for the number of infidels slaughted by their orders." (ಮೇಲಿನ ಹೋಲಿಕೆ ಸಂಪೂರ್ಣ ಸರಿಯಾದುದು). ಟಿಪ್ಪುವಿನ ಗ್ರಂಥಾಲಯದಲ್ಲಿ ದೊರಕಿರುವ ದಾಖಲೆಗಳಲ್ಲಿ ಅವನು ಕನಸಿನಲ್ಲಿ ಪುರುಷನೊಬ್ಬನನ್ನು ಕಂಡು ಅವನನ್ನು ಉಪಚರಿಸಿದರೆ ಆ ಪುರುಷನು ದೆವ್ವವಾಗಿ ಕಾಣಿಸಿಕೊಂಡು ತನ್ನ ಬಟ್ಟೆ ತೆಗೆದು ತೋರಿಸಿದಾಗ ಎದೆಯ ಹೆಣ್ಣಿನ ಎದೆಯಂತಿತ್ತು. ಅದರಿಂದ ಟಿಪ್ಪು ಊಹಿಸಿ ಸಂತೋಷಿಸಿದ. ಮರಾಠರು ಮೇಲ್ನೋಟಕ್ಕೆ ಗಂಡಸರಾದರೂ ಸ್ವಭಾವದಲ್ಲಿ ಹೆಂಗಸರು. 1796ರಲ್ಲಿ ಹೆಸರಿಗೆ ಮಾತ್ರ ಹಿಂದೂ ರಾಜನಾಗಿದ್ದ ಒಂಬತ್ತನೇ ಚಾಮರಾಜ ಒಡೆಯರ್ ಸಿಡುಬಿನಿಂದ ಕಣ್ಮುಚ್ಚಿದ. ಅವನಿರುವವರೆಗೆ ದಸರಾ ಹಬ್ಬದಲ್ಲಿ ದರ್ಬಾರ್ ನಡೆಸಲು ಟಿಪ್ಪು ಅನುಮತಿ ನೀಡಿದ್ದ. ಹಿಂದೂ ರಾಜ ಸತ್ತ ಮೇಲೆ ಅವನ ಜಾಗದಲ್ಲಿ ಬೇರೊಬ್ಬನನ್ನು ನೇಮಿಸಲು ಟಿಪ್ಪು ಮನಸ್ಸು ಮಾಡಲಿಲ್ಲ. ಅವನು ರಾಜ ಕುಟುಂಬವನ್ನು ಚಿಕ್ಕ ಮನೆಗೆ ಸ್ಥಳಾಂತರಿಸಿದ. ವಿಲ್ಕ್ಸ ಪ್ರಕಾರ ಆಗ ಮೂರನೇ ಕೃಷ್ಣರಾಜ ಒಡೆಯರ್ ಎರಡು ವರ್ಷದವನು. ಟಿಪ್ಪು ಅವನ ಚಿನ್ನದ ಕೈ ಬಳೆಗಳನ್ನು ಕಿತ್ತಾಗ ಆ ಹುಡುಗ ಬಿಕ್ಕಳಿಸಿ ಅಳುತ್ತಿದ್ದ. (ವಿಧವೆ ರಾಣಿ ಲಕ್ಷ್ಮಮ್ಮಣ್ಣಿಯನ್ನು ಟಿಪ್ಪು ನಡೆಸಿಕೊಂಡ ಕ್ರೂರ ರೀತಿ ಹಿಂದೆಯೇ ಬಂದಿದೆ.) ಟಿಪ್ಪು ಮಡಿದ ಮೇಲೆ ಪೂರ್ಣಯ್ಯನವರು ಕರುಣೆ ವಹಿಸಿ ಟಿಪ್ಪು ವಂಶದವರ ಗೌರವವನ್ನು ಉಳಿಸಬೇಕೆಂದರು. ಅವನ ಮಕ್ಕಳಿಗೆ ಆದಷ್ಟು ಸಂಪತ್ತನ್ನು ನೀಡಲು ಬ್ರಿಟಿಷ್ ಸರ್ಕಾರವನ್ನು ಕೋರಿದರು. ಟಿಪ್ಪು ಸಾವಿನ ಬಳಿಕ ಮೈಸೂರಿನ ಹಿಂದೂ ದೊರೆಗಳು ತಮಗೆ ಪ್ರಾಮಾಣಿಕವಾಗಿ ನಿಷ್ಠರಾಗಿರುತ್ತಾರೆಂಬ



ನಂಬಿಕೆಯಿದ್ದುದರಿಂದ ಬ್ರಿಟಿಷ್ ಸರ್ಕಾರ ಮೈಸೂರು ಅರಸರು ಕಳೆದುಕೊಂಡಿದ್ದ ಹಿಂದೂ ರಾಜ್ಯವನ್ನು ಅವರಿಗೆ ಮರಳಿಸಿದರು. ಟಿಪ್ಪು ಸಾವಿನ ಬಳಿಕ ಹೈದರ್, ಟಿಪ್ಪು ಜನಾನಾದಲ್ಲಿ (ಅಂತಃಪುರ, ರಾಣಿಗೃಹ) ಆರುನೂರಕ್ಕಿಂತ ಹೆಚ್ಚು ಸ್ತ್ರೀಯರು, ಟಿಪ್ಪುವಿನ ಇಪ್ಪತ್ತೈದು ಗಂಡು ಮಕ್ಕಳು ಹೆಣ್ಣು ಮಕ್ಕಳು ಇದ್ದರು. (ಈ ಸಂಖ್ಯೆ ಹೆಚ್ಚು ಕಡಮೆ ಆಗುತ್ತದೆ). ಅವರೆಲ್ಲರಿಗೂ ಸೂಕ್ತ ಪೆನ್ಷನ್, ಪ್ರಯಾಣ ಭತ್ಯೆ ನೀಡಲಾಯ್ತು. ಮೊದಲ ನಾಲ್ಕು ಜನ ಹಿರಿಯ ಗಂಡು ಮಕ್ಕಳು ಮತ್ತು ಅವರ ಪರಿವಾರ ವೆಲ್ಲೋರಿಗೆ 1799 ಜೂನ್ 18 ಹೋದರು. (ಟಿಪ್ಪು ಹತ್ಯೆ 1799 ಮೇ. 4). ಒಂಬತ್ತನೇ ಚಾಮರಾಜ ಒಡೆಯರ್ ಮೂರು ವರ್ಷದ ಹಿಂದೆ ಮಡಿದಿದ್ದು ಗುಪ್ತವಾಗಿ ಬದುಕಿದ್ದ ಅವರ ಮಗ ಐದು ವರ್ಷದ ಬಾಲಕ ಮುಮ್ಮಡಿ ಕೃಷ್ಣರಾಜನನ್ನು ಮುಂದಿನ ರಾಜನನ್ನಾಗಿ ಆಯ್ಕೆ ಮಾಡಲಾಯಿತು. ಪೂರ್ಣಯ್ಯನವರು ದಿವಾನರಾಗಿ ಮುಂದುವರಿದರು. ಅಂದಿನಿಂದ ಮೈಸೂರು ರಾಜ್ಯದ ರಾಜಧಾನಿ ಶ್ರೀರಂಗಪಟ್ಟಣದಿಂದ ಮೈಸೂರು ಪಟ್ಟಣಕ್ಕೆ ವರ್ಗಾವಣೆಯಾಯ್ತು. ಬ್ರಿಟಿಷರ ಸೇನೆಯ ಕೇಂದ್ರ ಶ್ರೀರಂಗಪಟ್ಟಣವಾಯ್ತು. (ಪು. 53–93).

1772 ಫೆಬ್ರವರಿ 8ರಂದು ಕಾರ್ನ್ ವಾಲೀಸ್ ಶ್ರೀರಂಗಪಟ್ಟಣ ಅಕ್ರಮಿಸಿ ಟಿಪ್ಪು ಶರಣಾಗತನಾಗುವಂತೆ ಮಾಡಿದ. ಟಿಪ್ಪು ಇಂಗ್ಲೆಂಡಿಗೆ 3 ಕೋಟಿ ಪರಿಹಾರ ಧನ ನೀಡಲು ಒಪ್ಪಿ ಹಣ ಇಲ್ಲದ್ದಕ್ಕೆ ತನ್ನ ಇಬ್ಬರು ಮಕ್ಕಳನ್ನು ಒತ್ತೆಯಿಟ್ಟ. ಇಂಗ್ಲಿಷ್ ಸೈನ್ಯ ಅವನ ಅರ್ಧ ರಾಜ್ಯ ವಶಪಡಿಸಿಕೊಂಡಿತು. ಸ್ವಲ್ಪ ಕಾಲದ ಬಳಿಕ ಟಿಪ್ಪು ವಾಗ್ದಾನ ಮಾಡಿದಂತೆ ಇಂಗ್ಲೀಷರಿಗೆ 3 ಕೋಟಿ ಹಣ ನೀಡಿ ತನ್ನ ಮಕ್ಕಳನ್ನು ಬಿಡಿಸಿಕೊಂಡು ತರಿಸಿದ. ಇದರ ಜೊತೆಗೆ ಉತ್ತರ ಕನ್ನಡ ಜಿಲ್ಲೆಯ ಹೆಂಜೆಯನಾಯಕನನ್ನು ಹೋಲಿಸಿ. ಟಿಪ್ಪುವಿನ ಸಮಕಾಲೀನ ಹೆಂಜೆಯ ನಾಯಕ ಸೋದೆ ರಾಜರ ಸೈನ್ಯದಲ್ಲಿ ಕೆಲಸ ನಿರ್ವಹಿಸುತ್ತಿದ್ದ. ಅವನ ಕಾಲಕ್ಕೆ ಆ ಪ್ರದೇಶದ ರೈತರ ಮೇಲೆ ಟಿಪ್ಪುವಿನ ಆಡಳಿತಾಧಿಕಾರಿಗಳು ಅಧಿಕ ಕಂದಾಯ ಹಾಕುತ್ತಿದ್ದರು. ರೈತರು ದಂಗೆಯೆದ್ದಾಗ ಅವರ ಬೆಂಬಲಕ್ಕೆ ನಿಂತು ಹೋರಾಡಿದ. ತಾನೇ ಸ್ವತಃ ಅಶ್ವದಳ ರಚಿಸಿಕೊಂಡು ಟಿಪ್ಪುವಿನ ಸೈನ್ಯದ ಮೇಲೆ ಮುಗಿಬಿದ್ದ. 1798ರಲ್ಲಿ ಟಿಪ್ಪು ತನ್ನ ಸಾವಿಗಿಂತ ಒಂದು ವರ್ಷ ಮುಂಚೆ ಹೆಂಜೆ ನಾಯಕನ ವಿರುದ್ಧ ಸೈನ್ಯ ಕಳುಹಿಸಿ ಜಯಗಳಿಸಿದರೂ ಶರಣಾಗತನಾಗಲು ಒಪ್ಪಲಿಲ್ಲ. ಟಿಪ್ಪು ಸೈನಿಕರು ಅವನ ಇಬ್ಬರು ಮಕ್ಕಳನ್ನು ಸೆರೆ ಹಿಡಿದು ಬಂಡಾಯ ನಿಲ್ಲಿಸಿದರೆ ಮಾತ್ರ ನಿನ್ನ ಮಕ್ಕಳ ಬಿಡುಗಡೆ ಎಂದು ಹೆದರಿಸಿದರೂ ಹೆಂಜೆ ನಾಯಕ ಮಣಿಯಲಿಲ್ಲ.

❋ ❋ ❋ ❋

# 10. "ಪಟ್ಟೋಲೆ ಪಳಮೆ"

ಟಿಪ್ಪು ಸಾವಿನ ಬಳಿಕ 1924ರಲ್ಲಿ ರಚಿತವಾದ ಕೊಡಗಿನ ಚರಿತ್ರೆಯನ್ನು ನಿರೂಪಿಸಿರುವ "ಪಟ್ಟೋಲೆ ಪಳಮೆ"ಎಂಬ ಐತಿಹಾಸಿಕ ದಾಖಲೆಯಲ್ಲಿ ಹೈದರ್ ಮತ್ತು ಟಿಪ್ಪು ಬಗ್ಗೆ ದೊರಕುವ ಕೆಲವು ಮಾಹಿತಿಯನ್ನು ಹಾಗೆಯೇ ಉಲ್ಲೇಖಿಸಲಾಗಿದೆ. (ಲೇಖಕ: ನಡಿಕೇರಿಯಂಡ ಚಿಣ್ಣಪ್ಪ).

"1782ರಲ್ಲಿ ಹೈದರಾಲಿ ಇಂಗ್ಲಿಷ್‌ರ ಮೇಲೆ ಯುದ್ಧಕ್ಕಾಗಿ ಆರ್ಕಾಟಿಗೆ ಹೋಗುವಾಗ ಕೊಡಗಿನ ಅಮಲನ್ನು ಕೊಡಗಿನ ಕರಣೀಕನಾಗಿದ್ದ ಸುಬ್ಬರಸಯ್ಯನೆಂಬ ಬ್ರಾಹ್ಮಣನಿಗೆ ಕೊಟ್ಟುಹೋದನು. ಆದರೆ ಕೊಡಗರು ಬ್ರಾಹ್ಮಣನ ಕೈ ಕೆಳಗೆ ಇರಲು ಇಷ್ಟ ಪಡದೆ ದಂಗೆ ಎದ್ದರು. ಸುಬ್ಬರಸಯ್ಯನು ಈ ಸಮಾಚಾರವನ್ನು ಹೈದರಾಲಿಗೆ ತಿಳಿಸಲು ದೊರೆ ಮಕ್ಕಳನ್ನು ಮೈಸೂರು ದೇಶದ ದುರ್ಗದ ತಾಲ್ಲೋಕು ಗೋರೂರಿನಲ್ಲಿಡುವ ಹಾಗೆ ಅಪ್ಪಣೆ ಮಾಡಿದನು. ಅದೇ ರೀತಿ ಸುಬ್ಬರಸೈಯ್ಯನು ದೊರೆ ಮಕ್ಕಳನ್ನು ಗೋರೂರಿನಲ್ಲಿಡಿಸಿದನು. ಈ ಸಂಗತಿಯನ್ನು ತಿಳಿದು ಕೊಡಗರು ಪುನಃ ದಂಗೆ ಎದ್ದು ತುರುಕರ ಸೈನ್ಯವೆಲ್ಲವನ್ನೂ ಹೊಡೆದು ಓಡಿಸಿಬಿಟ್ಟರು. ಆಮೇಲೆ ರೈತರೇ ರಾಜ್ಯವನ್ನು ಆಳುವುದಕ್ಕೆ ಏರ್ಪಡಿಸಿದರು. 1782ರಲ್ಲಿ ಹೈದರಾಲಿ ಆರ್ಕಾಟಿನಲ್ಲಿ ಮೃತ ಪಟ್ಟನು. ಹೈದರಾಲಿಯು  ಸತ್ತ ನಂತರ ಟಿಪ್ಪು ಸುಲ್ತಾನನು ಕೊಡಗಿನ ರಾಜಕುಮಾರನನ್ನು ಕುಟುಂಬಸಮೇತ ಗೋರೂರಿಂದ ಪೆರ್ಯಾಪಟ್ಟಣಕ್ಕೆ ಕಳುಹಿಸಿ ಅಲ್ಲಿ ಕೈದಿನಲ್ಲಿಟ್ಟನು. ಇವರಲ್ಲಿ ಅನೇಕರು ಸಿಡುಬಿನಿಂದಲೂ ಸರಿಯಾಗಿ ಅನ್ನಪಾನ ಇಲ್ಲದೆಯೂ ಮೃತ ಪಟ್ಟು ಹೋದರು. 1784ರಲ್ಲಿ ಟಿಪ್ಪುವು ಕೊಡಗಿಗೆ ಬಂದು ಶರಾರತು ಮಾಡಿದ ಕೊಡಗರಿಗೆ ನಂಬಿಕೆ ಭರವಸೆ ಕೊಟ್ಟು, ಕೊಡಗರೊಡನೆ ಒಪ್ಪಂದ ಮಾಡಿ ಶ್ರೀರಂಗಪಟ್ಟಣಕ್ಕೆ ಹೊರಟು ಹೋದನು. 1785ರಲ್ಲಿ ಕೊಡಗರು ಪುನಃ ದಂಗೆ ಎದ್ದರು. ಇದನ್ನು ನಿಲ್ಲಿಸುವುದಕ್ಕಾಗಿ ಜೈನುಲಾಬುದೀನ್ ಸೂಸ್ತ್ರ ಎಂಬುವವನನ್ನು 15 ಸಾವಿರ ಪವುಜಿನೊಡನೆ ಕೊಡಗಿಗೆ ಕಳುಹಿಸಿದನು. ಅವನು ಬುದು ಉಲುಗುಲಿ ಸಂತೆ ಮಾಳದಲ್ಲಿಳಿದುಕೊಂಡನು. ನಾಲ್ಕೈದು ಸಾವಿರ ಕೊಡಗರು ಅವನ ಸೈನ್ಯವನ್ನು ಮುತ್ತಿಕೊಂಡು ಬಹಳ ತುರುಕರನ್ನು ಕೊಂದು ಹಾಕಿದರು. ತುರುಕರು ತಮ್ಮ ಸಾಮಾನು ಸರಂಜಾಮುಗಳನ್ನು ಬಿಟ್ಟು ಓಡಿ ಹೋಗಿ ಬೆಟ್ಟದ ಪುರದಲ್ಲಿಳಿದುಕೊಂಡರು. ಈ ವರ್ತಮಾನವು ಟಿಪ್ಪುವಿಗೆ ಮುಟ್ಟಿ ತಾನೇ ಖುದ್ದು ಸೈನ್ಯವನ್ನು ತೆಗೆದುಕೊಂಡು ಬಂದು ಅದೇ ಉಲುಗುಲಿ ಸಂತೆಮಾಳದಲ್ಲಿಳಿದುಕೊಂಡು ಬಂದು ಅದೇ ಮೇರೆ ಮೋಸಪಡಿಸಿ ಅಲ್ಲಿಂದ ಭಾಗಮಂಡಲಕ್ಕೆ ಹೋಗಿ ದೇವಟುಪರಂಬಿನಲ್ಲಿಳಿದುಕೊಂಡು ಕೊಡಗರನ್ನೆಲ್ಲ ತನ್ನ ಹತ್ತಿರ ಕರೆದುಕೊಂಡು ಪಹರೆ ಭದ್ರಿಕೆಯಲ್ಲಿಟ್ಟು ಕೊಡಗು ಜನರ ಕುಟುಂಬ ಮಕ್ಕಳನ್ನೆಲ್ಲ ಭೇಟಿ ಮಾಡಿ ಒಂದು ಲಕ್ಷ ಹನ್ನೊಂದು ಸಾವಿರ ಜನರನ್ನು ಶ್ರೀರಂಗಪಟ್ಟಣಕ್ಕೆ ಹಿಡಿದುಕೊಂಡು



ಹೋಗಿ ಬಲಾತ್ಕಾರದಿಂದ ಜಾತಿ ಕೆಡಿಸಿ ಮಹಮ್ಮದೀಯ ಮತಕ್ಕೆ ಸೇರಿಸಿದನು. ಇದರ ಮೇಲೆ ಟಿಪ್ಪುವು ಕೊಡಗು ಜನರ ಭೂಮಿ ಮನೆಗಳನ್ನು ಮುಸಲ್ಮಾನರಿಗೆ ಜಹಗೀರಾಗಿ ಕೊಟ್ಟು ಈ ರೀತಿಯಾಗಿ ಇಸ್ತಿಹಾರನು ಬಹಿರಂಗಪಡಿಸಿದನು – "ಈ ದೇಶವನ್ನು ನಿಮಗೆ ಜಹಗೀರಾಗಿ ಕೊಡಲ್ಪಟ್ಟಿದೆ. ಇದನ್ನು ವೃದ್ಧಿಮಾಡಿಕೊಂಡು ಸುಖವಾಗಿರತಕ್ಕದ್ದು. ಅಲ್ಲದೆ ಈ ದೇಶದಲ್ಲಿರುವ ಪರ್ವತ ನಿವಾಸಿಗಳನ್ನು ನಿರ್ಮೂಲಪಡಿಸಬೇಕೆಂದು ನಮ್ಮ ರಾಜಾಜ್ಞೆಯಾಗಿರುವುದರಿಂದ ನಮ್ಮ ದೃಷ್ಟಿಯಿಂದ ತಪ್ಪಿ ಹೋಗಿರುವವರನ್ನು ಹುಡುಕಿಹಿಡಿದು ಕೊಲ್ಲುವುದು ನಿಮಗೆ ದೊಡ್ಡ ಬಹುಮಾನದ ಕೆಲಸವೆಂದು ತಿಳಿದಿರತಕ್ಕದ್ದು. ಅವರ ಕುಟುಂಬ ಮಕ್ಕಳೆಲ್ಲವೂ ನಿಮಗೆ ಗುಲಾಮಗಿರಿಯಾಗತಕ್ಕದ್ದು.". (ಪು. 43–45).

ಇದು ಬಹು ವಿಶ್ವಾಸಾರ್ಹ ಚರಿತ್ರೆ. ಟಿಪ್ಪುವು ಕೊಡಗಿನ ಒಂದು ಲಕ್ಷ ಹನ್ನೊಂದು ಸಾವಿರ ಜನ ಹಿಂದೂಗಳನ್ನು ಬಲಾತ್ಕಾರದಿಂದ ಇಸ್ಲಾಮಿಗೆ ಸೇರಿಸಿಕೊಂಡ. (ಈ ಸಂಖ್ಯೆ ಖಂಡಿತ ಉತ್ಪ್ರೇಕ್ಷೆ. ಆ ಕಾಲದಲ್ಲಿ ಜನಗಣನೆಯ ವ್ಯವಸ್ಥೆ ಇರಲಿಲ್ಲ) ಅಷ್ಟೇ ಅಲ್ಲ, ಕೊಡಗನ್ನು ಗೆದ್ದು ಇಡೀ ಕೊಡಗನ್ನು ಮುಸ್ಲಿಮರಿಗೆ ಜಹಗೀರಾಗಿ ಕೊಟ್ಟು, ಕಣ್ತಪ್ಪಿಸಿಕೊಂಡು ಹೋಗಿರುವವರನ್ನು ಕೊಲ್ಲಲು ಮಾತ್ರವಲ್ಲ, ಅವರ ಮನೆಯ ಹೆಂಗಸರು ಮಕ್ಕಳನ್ನು ಗುಲಾಮರನ್ನಾಗಿಟ್ಟುಕೊಳ್ಳಲು ಅಪ್ಪಣೆ ಕೊಟ್ಟ. ("ಪಟ್ಟೋಲೆ ಪಳಮೆ"ಯು ಇಪ್ಪತ್ತನೇ ಶತಮಾನದ ಆರಂಭದಲ್ಲಿ ರಚಿತವಾದ ಕೃತಿ").

## "ವೀರರಾಜೇಂದ್ರರ ಪತ್ರ"

ಟಿಪ್ಪು ಸಮಕಾಲೀನ ಕೊಡಗಿನ ದೊರೆ ವೀರರಾಜೇಂದ್ರ ಬ್ರಿಟಿಷ್ ಅಧಿಕಾರಿಗಳಿಗೆ ಬರೆದ ಪತ್ರ ಬಹು ಪ್ರಮುಖ ದಾಖಲೆ. ಅವನು ಬರೆದಿರುವ ಪತ್ರದ (ಸಂ:ತಿ.ತಾ. ಶರ್ಮ. ಚಾರಿತ್ರಿಕ ದಾಖಲೆಗಳು. (1971) ಕೆಲವು ಭಾಗಗಳು ಇಂತಿವೆ – "ಕಾಲ್ ಬಾಹದದವರ ಯಿ ನಾಯಕ ನಾ ಮೆಲಿ ಕೆಪಟೆಂನ್ ಮಾವಿನರ  ಮುಖವಚನದಿಂದ ನಿಮಗೆ ತಿಳಿಪಟ್ಟು ಯಿಧೀತಷ್ಟೆ..... ಅರಕಲ್ ಗೋಡಲ್ಲಿ ಸೂರಯಂಬ ಬ್ರಾಹ್ಮಣಯೀಗ ಅಮಲು ಮಾಡಿಕೊಂಡಿದ್ದಾನಲ್ಲ ಆತನ ಟಿಪ್ಪು ಸುಲ್ತಾನರ ಕೂಡಿ ಶಹಬಾಸುತ್ತೆಗೆದುಕೊಳ್ಳಬೇಕೆಂಬುದಾಗಿ .... ತೊರೆನೂರು ಹೆಬ್ಬಾಲೆ ಶಿರಂಗಾಲ ಮುತ್ತಾದ ಗ್ರಾಮದ ರೈತರ ಸರ್ವಸ್ವವನ್ನು ಲೂಟಿಶಿ ಅಲ್ಲಿದ್ದ ರೈತರ ಕಡಿದು ಕೈಗೆ ಶಿಕ್ಕಿದಂತ್ತ ಆ ಗ್ರಾಮದ ಗಉಡ ಗಂಡಾದ ಜನ ಸಹಾ ಕೈಕಾಲು ಕಟ್ಟಿ ಹೊಳೆಗೆ ಯೆತ್ತಿ ಹಾಕಿ ಆ ಗ್ರಾಮದ ಮನೆ ಮಾರಿಗೆಲ್ಲಾ ಬೆಂಕಿ ಹಾಕಿ ಸುಟ್ಟು ಆ ರೈತರ ಹೆಂಗಸರು ಮಕ್ಕಳು ಯಾವತ್ತಂನ್ನು ಹಿಡುಕೊಂಡು ಹೋದರು ..... ಹಿಂದೆ ಟೀಪು ಸುಲುತಾನನ್ನು ನಂಮ್ಮನೀಗಲೇ ನಂಬಿಶಿ ಕುಟುಂಬ ಮಕ್ಕಳು ಸಮೇತ ಅರವತ್ತು ನಾಲ್ಕು ಸಾವಿರದ ಕೊಡಗರು ಯಿದಲ್ಲದೆ ಯಿನ್ನು ಕೆಲವು ಜಾತಿ ಜನರ ಸಹಾ ಹಿಡುಕೊಂಡು ಹೋಗಿ ಪಟ್ಟಣದಲ್ಲಿ ಸೆರೆಹಾಕಿಕೊಂಡು ಹಿದ್ದ ತಾವು ನೆಮ್ಮ ದೊರೆಗಳು ಯೆಂಬದ್ದರಿಂದಲೂ ನಮ್ಮ ಸ್ಥಳ ಯಂಬದ್ದರಿಂದಲೂ ನಮ್ಮ

ಹೆಂಗಸರು ಮಕ್ಕಳನ್ನೆಲ್ಲ ಬಿಟ್ಟು ವಂದು ವಂದು ಗಂಡು ಜನ ಯಿಲ್ಲದೆ ವ್ಹೋಡಿ ಬಂದೆಉ ನಮ್ಮ ಹೆಂಗಸರು ಮಕ್ಕಳನ್ನು ಟೀಪು ಸುಲ್ತಾನನನ್ನು ತಮ್ಮ ಕಡೆ ಜನಕ್ಕೆ ಕೊಟ್ಟು ಬಿಟ್ಟು ಬಹಳ ಜನ ಕೊಂದು ಬಿಟ್ಟ ಉಳಿದ ಸಣ್ಣ ಮಕ್ಕಳನೆಲ್ಲಾ ಕೋಜಾ ಮಾಡಿಬಿಟ್ಟ........"

ಟಿಪ್ಪುವೂ ಟಿಪ್ಪು ಬೆಂಬಲ ಪಡೆದಿದ್ದ ಮುಸ್ಲಿಮರೂ ಹಿಂದೂಗಳ ಮೇಲೆ ದಬ್ಬಾಳಿಕೆ ಮಾಡಿ ಕೊಂದದ್ದಲ್ಲದೆ ಟಿಪ್ಪುವಿನ "ಶಹಬಾಸ್" ಅಥವಾ ಮೆಚ್ಚುಗೆ ಪಡೆಯಲು ಕೆಲವು ಹಿಂದೂಗಳು ಸಹಕರಿಸಿದರು ಎಂದು ಮೇಲಿನ ಕೊಡಗು ರಾಜನ ಪತ್ರದಿಂದ ಸೂಚಿತವಾಗಿದೆ. ಕೊಡಗಿನಲ್ಲಿ 64000 ಜನರನ್ನೂ, ಹೆಚ್ಚಾಗಿ ಹಿಂದೂಗಳನ್ನು ಸೆರೆಯಿಟ್ಟ. ಸಾವಿರಾರು ಹಿಂದೂ ಸ್ತ್ರೀಯರನ್ನು ಮುಸ್ಲಿಮರಿಗೆ ಕೊಟ್ಟ ; ಬಹು ಸಂಖ್ಯೆಯ ಚಿಕ್ಕ ಮಕ್ಕಳನ್ನು ನಪುಂಸಕರನ್ನಾಗಿ ಮಾಡಿದ. ("ಖೋಜಾ ಮಾಡಿಬಿಟ್ಟ). "ಖೋಜಾ ಮಾಡು" ಎಂಬ ಮಾತಿಗೆ ಮರ್ಮಾಂಗವನ್ನು ಪೂರ್ತಿ ಕಿತ್ತು ಹಾಕಿದ ಎಂಬುದು ವಾಚ್ಯಾರ್ಥವಾದರೂ ಮರ್ಮಾಂಗ ಅಥವಾ ಶಿಶ್ನದ ಮುಂಭಾಗ ಕತ್ತರಿಸಿ ಅವರನ್ನು ಮುಸ್ಲಿಮರನ್ನಾಗಿ ಮಾಡಿದ ಎಂಬ ಸೂಚ್ಯಾರ್ಥವೂ ಸಾಧ್ಯ. (ಬಹುಶಃ ಇದೇ ಸರಿ) ಇಂಗ್ಲಿಷರಿಗೆ ಮನವಿ ಮಾಡಿಕೊಂಡಿದ್ದು ಸ್ವಾಭಾವಿಕ. ಎಂದರೆ "ಪಟ್ಟೋಲೆ ಪಳಮೆ" ಯಲ್ಲಿನ ಮಾಹಿತಿ ಐತಿಹಾಸಿಕ ಸತ್ಯ; ಮತ್ತು ಅಂತಹ ಮೂಲ ಆಕರಗಳನ್ನಿಟ್ಟುಕೊಂಡೇ "ಪಟ್ಟೋಲೆ ಪಳಮೆ" ರಚಿತವಾಗಿದೆ. ಪತ್ರದ ಕೊನೆಯಲ್ಲಿ ವೀರರಾಜೇಂದ್ರ ಒಡೆಯನು "Veer Rajendra warriar" ಎಂದು ಇಂಗ್ಲಿಷಿನಲ್ಲಿ ರುಜು ಹಾಕಿ, ಟಿಪ್ಪುವಿನಿಂದ ತನ್ನ ರಾಜ್ಯವನ್ನು ಬಿಡುಗಡೆ ಮಾಡಿದರೆ "ದುಸಮಾನನ ನಿಗ್ರಹವಾಗಿ" (ದುಷ್ಟನ ಸಂಹಾರ ಆಗಿ), ತಾನು "ಇಂಗ್ರೇಜ ಸರಕಾರ ಚಾಕ್ರಿ ಮಾಡಿ" ಕೊಂಡದ್ದನ್ನು ಮುಂದುವರಿಸುವುದಾಗಿ ಭರವಸೆ ನೀಡಿದ್ದಾನೆ (Warriar = ಒಡೆಯರ್).

ಡಿ.ಎನ್. ಕೃಷ್ಣಯ್ಯನವರು ಬರೆದಿರುವ "ಕೊಡಗಿನ ಇತಿಹಾಸ" ಗ್ರಂಥವು (1974) ಮೇಲಿನ ಸಂಗತಿಯನ್ನೇ ಸಮರ್ಥಿಸುತ್ತದೆ. ಟಿಪ್ಪು ಸುಲ್ತಾನನು ಕೊಡಗಿನ ಮೇಲೆ ಧಾಳಿ ಮಾಡುವ ಮುನ್ನ ಅವರನ್ನು ಚೆನ್ನಾಗಿ ಆಳುವೆನೆಂದು ಸುಳ್ಳು ಭರವಸೆ ಕೊಟ್ಟಿದ್ದ. ಅವನು 1785 ಡಿಸೆಂಬರ್ ನಲ್ಲಿ "ಸುಮಾರು 80 ಸಾವಿರ ಜನ ಗಂಡಸರು ಹೆಂಗಸರು ಮತ್ತು ಮಕ್ಕಳು ಹಿಡಿದು ತರಲ್ಪಟ್ಟರು ಎಂದು ಟಿಪ್ಪು ಸುಲ್ತಾನನ ಆಸ್ಥಾನದ ಚರಿತ್ರೆಗಾರ ಮೀರ್ ಹುಸ್ಸೇನ್ ಆಲಿ ಕಿರ್ಮಾನಿಯೆಂಬುವನು ಬರೆಯುತ್ತಾನೆ" (ಲೆ.ಕ. ಮಾರ್ಕ್ಸ್ ವಿಲ್ಕ್ಸ್ ಬರೆದಿರುವ ಮೈಸೂರಿನ ಚರಿತ್ರೆಯಲ್ಲಿಯೂ ಇದರ ಪ್ರಸ್ತಾಪವಿದೆ. ಸುಲ್ತಾನನ ಸೈನಿಕರು ಸುಮಾರು 70 ಸಾವಿರ ಜನರನ್ನು ಕೊಡಗಿನಿಂದ ಹಿಡಿದುಕೊಂಡು ಹೋದರೆಂದು ಅಲ್ಲಿ ಹೇಳಿದೆ.) ಶ್ರೀರಂಗಪಟ್ಟಣದಲ್ಲಿ ಸುಲ್ತಾನನು ಕೊಡಗಿನಿಂದ ಸೆರೆಹಿಡಿದು ತರಲ್ಪಟ್ಟವರನ್ನೆಲ್ಲಾ ಮುಸಲ್ಮಾನರಾಗಿ ಮತಾಂತರಗೊಳಿಸಿ ತನ್ನ ರಾಜ್ಯದ ಬೇರೆ ಬೇರೆ ಗಡಿ ಸೀಮೆಗಳಲ್ಲಿ ವಾಸಿಸುವಂತೆ ಅವರನ್ನು ಗುಂಪು ಗುಂಪಾಗಿ ಕಳುಹಿಸಿದ. ಹೀಗೆ ಮತಾಂತರಗೊಳಿಸಲ್ಪಟ್ಟ ಕೊಡಗು ಜನರು ಅಹಮ್ಮದೀಯರು ಎಂದು



ಕರೆಯಲ್ಪಟ್ಟರು. ಕೊಡಗಿನಿಂದ ಸೆರೆ ಹಿಡಿದು ತೆಗೆದುಕೊಂಡು ಹೋದ 85 ಸಾವಿರ ಜನರನ್ನು ಬಲಾತ್ಕಾರವಾಗಿ ಇಸ್ಲಾಂ ಮತಕ್ಕೆ ಸೇರಿಸಿದ ಪವಿತ್ರ ದಿನದಲ್ಲಿ ಸುಲ್ತಾನನು ತಾನು 'ಬಾದಷಹ್' ಎಂಬ ಬಿರುದನ್ನು ಧರಿಸಿಕೊಂಡನು ಮತ್ತು ಡಿಲ್ಲಿಯ ಮೊಗಲ್ ಬಾದಷಾಹನ ಅಧಿಕಾರದಿಂದ ಮುಕ್ತನಾಗಿ ತಾನು ಸ್ವತಂತ್ರನೆಂದು ಸಾರಿಕೊಂಡನು.(ಪು 153–5).

ಟಿಪ್ಪು ಸಮಕಾಲೀನ ಪತ್ರ, ಇಪ್ಪತ್ತನೇ ಶತಮಾನದ ಎರಡು ಚಾರಿತ್ರಿಕ ಬರಹಗಳು ಇವೆಲ್ಲವೂ ಸ್ಪಷ್ಟವಾಗಿ ಟಿಪ್ಪು ಮನೋಧರ್ಮವನ್ನು ಬಿಂಬಿಸುತ್ತವೆ. ಕೊಡಗು ಜಿಲ್ಲಾ ಗೆಜೆಟಿಯರ್ (1992) ಕೊಡುವ ಮಾಹಿತಿಯೂ ಅದನ್ನೇ ಪುನರುಚ್ಚರಿಸುತ್ತದೆ (ಪು 91). ಕೊಡಗಿನ ಎಂಬತ್ತು ಸಾವಿರಕ್ಕೂ ಮೇಲ್ಪಟ್ಟು ಹಿಂದೂಗಳನ್ನು "ಮುಂಜಿ ಮಾಡಿ ಕುಲಗೆಡಿಸಿ ಚೇಲೆಯರ ಮಾಡಿ ಇರಿಸಿಕೊಂಡ" (ಮುಂಜಿಮಾಡು = 'ಸುನ್ನತಿ' ಮಾಡು = ಜನನಾಂಗದ ಮುಂಭಾಗವನ್ನು ಕತ್ತರಿಸಿ ಇಸ್ಲಾಮಿಗೆ ಮತಾಂತರಿಸುವುದು). (ಚೇಲೆ, ಚೇಲ = ಸೇವಕ).

❋ ❋ ❋ ❋

5P.

ಹೆಂಗಸರು ಮಕ್ಕಳನ್ನೆಲ್ಲ ಬಿಟ್ಟು ವಂದು ವಂದು ಗಂಡು ಜನ ಯಿಲ್ಲದೆ ವ್ರೋಡಿ ಬಂದೆಲು ನಮ್ಮ ಹೆಂಗಸರು ಮಕ್ಕಳನ್ನು ಟೀಪು ಸುಲ್ತಾನನನ್ನು ತಮ್ಮ ಕಡೆ ಜನಕ್ಕೆ ಕೊಟ್ಟು ಬಿಟ್ಟು ಬಹಳ ಜನ ಕೊಂದು ಬಿಟ್ಟೆ ಉಳಿದ ಸಣ್ಣ ಮಕ್ಕಳನೆಲ್ಲಾ ಕೋಜಾ ಮಾಡಿಬಿಟ್ಟೆ........"

ಟಿಪ್ಪುವೂ ಟಿಪ್ಪು ಬೆಂಬಲ ಪಡೆದಿದ್ದ ಮುಸ್ಲಿಮರೂ ಹಿಂದೂಗಳ ಮೇಲೆ ದಬ್ಬಾಳಿಕೆ ಮಾಡಿ ಕೊಂದದ್ದಲ್ಲದೆ ಟಿಪ್ಪುವಿನ "ಶಹಬಾಸ್" ಅಥವಾ ಮೆಚ್ಚುಗೆ ಪಡೆಯಲು ಕೆಲವು ಹಿಂದೂಗಳು ಸಹಕರಿಸಿದರು ಎಂದು ಮೇಲಿನ ಕೊಡಗು ರಾಜನ ಪತ್ರದಿಂದ ಸೂಚಿತವಾಗಿದೆ. ಕೊಡಗಿನಲ್ಲಿ 64000 ಜನರನ್ನೂ, ಹೆಚ್ಚಾಗಿ ಹಿಂದೂಗಳನ್ನು ಸೆರೆಯಿಟ್ಟೆ. ಸಾವಿರಾರು ಹಿಂದೂ ಸ್ತ್ರೀಯರನ್ನು ಮುಸ್ಲಿಮರಿಗೆ ಕೊಟ್ಟೆ ; ಬಹು ಸಂಖ್ಯೆಯ ಚಿಕ್ಕ ಮಕ್ಕಳನ್ನು ನಪುಂಸಕರನ್ನಾಗಿ ಮಾಡಿದ. ("ಖೋಜಾ ಮಾಡಿಬಿಟ್ಟೆ). "ಖೋಜಾ ಮಾಡು" ಎಂಬ ಮಾತಿಗೆ ಮರ್ಮಾಂಗವನ್ನು ಪೂರ್ತಿ ಕಿತ್ತು ಹಾಕಿದ ಎಂಬುದು ವಾಚ್ಯಾರ್ಥವಾದರೂ ಮರ್ಮಾಂಗ ಅಥವಾ ಶಿಶ್ನದ ಮುಂಭಾಗ ಕತ್ತರಿಸಿ ಅವರನ್ನು ಮುಸ್ಲಿಮರನ್ನಾಗಿ ಮಾಡಿದ ಎಂಬ ಸೂಚ್ಯಾರ್ಥವೂ ಸಾಧ್ಯ. (ಬಹುಶಃ ಇದೇ ಸರಿ) ಇಂಗ್ಲಿಷರಿಗೆ ಮನವಿ ಮಾಡಿಕೊಂಡಿದ್ದು ಸ್ವಾಭಾವಿಕ. ಎಂದರೆ "ಪಟ್ಟೋಲೆ ಪಳಮೆ" ಯಲ್ಲಿನ ಮಾಹಿತಿ ಐತಿಹಾಸಿಕ ಸತ್ಯ; ಮತ್ತು ಅಂತಹ ಮೂಲ ಆಕರಗಳನ್ನಿಟ್ಟುಕೊಂಡೇ "ಪಟ್ಟೋಲೆ ಪಳಮೆ" ರಚಿತವಾಗಿದೆ. ಪತ್ರದ ಕೊನೆಯಲ್ಲಿ ವೀರರಾಜೇಂದ್ರ ಒಡೆಯನು "Veer Rajendra warriar" ಎಂದು ಇಂಗ್ಲಿಷಿನಲ್ಲಿ ರುಜು ಹಾಕಿ, ಟಿಪ್ಪುವಿನಿಂದ ತನ್ನ ರಾಜ್ಯವನ್ನು ಬಿಡುಗಡೆ ಮಾಡಿದರೆ "ದುಸಮಾನನ ನಿಗ್ರಹವಾಗಿ" (ದುಷ್ಟನ ಸಂಹಾರ ಆಗಿ), ತಾನು "ಇಂಗ್ರೆಜ ಸರಕಾರ ಚಾಕ್ರಿ ಮಾಡಿ" ಕೊಂಡದ್ದನ್ನು ಮುಂದುವರಿಸುವುದಾಗಿ ಭರವಸೆ ನೀಡಿದ್ದಾನೆ (Warriar = ಒಡೆಯರ್).

ಡಿ.ಎನ್. ಕೃಷ್ಣಯ್ಯನವರು ಬರೆದಿರುವ "ಕೊಡಗಿನ ಇತಿಹಾಸ" ಗ್ರಂಥವು (1974) ಮೇಲಿನ ಸಂಗತಿಯನ್ನೇ ಸಮರ್ಥಿಸುತ್ತದೆ. ಟಿಪ್ಪು ಸುಲ್ತಾನನು ಕೊಡಗಿನ ಮೇಲೆ ಧಾಳಿ ಮಾಡುವ ಮುನ್ನ ಅವರನ್ನು ಚೆನ್ನಾಗಿ ಆಳುವೆನೆಂದು ಸುಳ್ಳು ಭರವಸೆ ಕೊಟ್ಟಿದ್ದ. ಅವನು 1785 ಡಿಸೆಂಬರ್ ನಲ್ಲಿ "ಸುಮಾರು 80 ಸಾವಿರ ಜನ ಗಂಡಸರು ಹೆಂಗಸರು ಮತ್ತು ಮಕ್ಕಳು ಹಿಡಿದು ತರಲ್ಪಟ್ಟರು ಎಂದು ಟಿಪ್ಪು ಸುಲ್ತಾನನ ಆಸ್ಥಾನದ ಚರಿತ್ರೆಗಾರ ಮೀರ್ ಹುಸ್ಸೇನ್ ಆಲಿ ಕಿರ್ಮಾನಿಯೆಂಬುವನು ಬರೆಯುತ್ತಾನೆ" (ಲೆ.ಕ. ಮಾರ್ಕ್ಸ್ ವಿಲ್ಕ್ಸ್ ಬರೆದಿರುವ ಮೈಸೂರಿನ ಚರಿತ್ರೆಯಲ್ಲಿಯೂ ಇದರ ಪ್ರಸ್ತಾಪವಿದೆ. ಸುಲ್ತಾನನ ಸೈನಿಕರು ಸುಮಾರು 70 ಸಾವಿರ ಜನರನ್ನು ಕೊಡಗಿನಿಂದ ಹಿಡಿದುಕೊಂಡು ಹೋದರೆಂದು ಅಲ್ಲಿ ಹೇಳಿದೆ.) ಶ್ರೀರಂಗಪಟ್ಟಣದಲ್ಲಿ ಸುಲ್ತಾನನು ಕೊಡಗಿನಿಂದ ಸೆರೆಹಿಡಿದು ತರಲ್ಪಟ್ಟವರನ್ನೆಲ್ಲಾ ಮುಸಲ್ಮಾನರಾಗಿ ಮತಾಂತರಗೊಳಿಸಿ ತನ್ನ ರಾಜ್ಯದ ಬೇರೆ ಬೇರೆ ಗಡಿ ಸೀಮೆಗಳಲ್ಲಿ ವಾಸಿಸುವಂತೆ ಅವರನ್ನು ಗುಂಪು ಗುಂಪಾಗಿ ಕಳುಹಿಸಿದ. ಹೀಗೆ ಮತಾಂತರಗೊಳಿಸಲ್ಪಟ್ಟ ಕೊಡಗು ಜನರು ಅಹಮ್ಮದೀಯರು ಎಂದು



ಕರೆಯಲ್ಪಟ್ಟರು. ಕೊಡಗಿನಿಂದ ಸೆರೆ ಹಿಡಿದು ತೆಗೆದುಕೊಂಡು ಹೋದ 85 ಸಾವಿರ ಜನರನ್ನು ಬಲಾತ್ಕಾರವಾಗಿ ಇಸ್ಲಾಂ ಮತಕ್ಕೆ ಸೇರಿಸಿದ ಪವಿತ್ರ ದಿನದಲ್ಲಿ ಸುಲ್ತಾನನು ತಾನು 'ಬಾದಷಹ್' ಎಂಬ ಬಿರುದನ್ನು ಧರಿಸಿಕೊಂಡನು ಮತ್ತು ಡಿಲ್ಲಿಯ ಮೊಗಲ್ ಬಾದಷಾಹನ ಅಧಿಕಾರದಿಂದ ಮುಕ್ತನಾಗಿ ತಾನು ಸ್ವತಂತ್ರನೆಂದು ಸಾರಿಕೊಂಡನು.(ಪು 153–5).

ಟಿಪ್ಪು ಸಮಕಾಲೀನ ಪತ್ರ, ಇಪ್ಪತ್ತನೇ ಶತಮಾನದ ಎರಡು ಚಾರಿತ್ರಿಕ ಬರಹಗಳು ಇವೆಲ್ಲವೂ ಸ್ಪಷ್ಟವಾಗಿ ಟಿಪ್ಪು ಮನೋಧರ್ಮವನ್ನು ಬಿಂಬಿಸುತ್ತವೆ. ಕೊಡಗು ಜಿಲ್ಲಾ ಗೆಜೆಟಿಯರ್ (1992) ಕೊಡುವ ಮಾಹಿತಿಯೂ ಅದನ್ನೇ ಪುನರುಚ್ಚರಿಸುತ್ತದೆ (ಪು 91). ಕೊಡಗಿನ ಎಂಬತ್ತು ಸಾವಿರಕ್ಕೂ ಮೇಲ್ಪಟ್ಟು ಹಿಂದೂಗಳನ್ನು "ಮುಂಜಿ ಮಾಡಿ ಕುಲಗೆಡಿಸಿ ಚೇಲೆಯರ ಮಾಡಿ ಇರಿಸಿಕೊಂಡ" (ಮುಂಜಿಮಾಡು = 'ಸನ್ನತಿ' ಮಾಡು = ಜನನಾಂಗದ ಮುಂಭಾಗವನ್ನು ಕತ್ತರಿಸಿ ಇಸ್ಲಾಮಿಗೆ ಮತಾಂತರಿಸುವುದು). (ಚೇಲೆ, ಚೇಲ = ಸೇವಕ).

* * * *

# 11. ಬೇರೆ ಬೇರೆ ಕೃತಿಗಳಿಂದ

## ಐ.ಮಾ. ಮುತ್ತಣ್ಣನವರ ಕೃತಿಯಿಂದ

ಐ.ಎಂ. ಮುತ್ತಣ್ಣನವರ "Tippu Sultan X' rayed (An untold story of a puffed up Nawab)" ಎಂಬ ಬೃಹತ್ ಕೃತಿಯ (1980) ಆರಂಭದಲ್ಲಿ ಒಂದು ಮಾತು ಹೇಳಿದ್ದಾರೆ – "I the anthor, I. M. Muthanna of Kodagu (Coorg), Karnataka, hail from a community that had valiantly and successfully faced about half a dozen generations ago Hyder Ali and TippuSultan's repeated raids and ravages". ಹೈದರ್ , ಟಿಪ್ಪು ಕಾಲದಲ್ಲಿ ಕೊಡಗು ಮೇಲೆ ನಡೆದ ಘೋರ ಆಕ್ರಮಣದ ಧಾಳಿಗೆ ಸಿಲುಕಿ ಧೈರ್ಯದಿಂದ ಎದುರಿಸಿದ ವಂಶದವರು ತಾವು ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಶ್ರೀರಂಗಪಟ್ಟಣ ಮೈಸೂರು ಪ್ರದೇಶಗಳ ಜನ ಈಗಲೂ ಆ ಘೋರ ಕಾಲವನ್ನು ನೆನಪು ಮಾಡಿಕೊಂಡು ದುಃಖಿಸುವಂತೆ ಕೊಡಗಿನ ಜನರೂ ಅದನ್ನು ಮರೆತಿಲ್ಲ; ಮಲಬಾರ್ ಪ್ರದೇಶದ ಜನರೂ ಮರೆತಿಲ್ಲ. ಅದರ ಜೊತೆಗೆ, ಅವರು ಬ್ರಿಟಿಷರಿಗೆ ಕೃತಜ್ಞತೆ ಅರ್ಪಿಸುತ್ತ, ಅವರು ಬಂದು ಭಾರತದಲ್ಲಿ ಪರಸ್ಪರ ಜಗಳ ಮಾಡುತ್ತಿದ್ದ ಸಂತರು, ಪೀತರನ್ನು (ಹಿಂದೂ ಮತ್ತು ಮುಸ್ಲಿಮರು) ನಾಶಪಡಿಸಿ ವಿಶಾಲವಾದ ಮತ್ತು ಭದ್ರಗಡಿಯ ಭಾರತವನ್ನು ಕಟ್ಟಿ ಆಧುನಿಕ ಬೆಳವಣಿಗೆ, ಶಿಕ್ಷಣ, ಆರ್ಥಿಕ ಪ್ರಗತಿ ಸಾಧಿಸಲು ಹೆಣಗಿದ ಬ್ರಿಟಿಷರನ್ನು ಕೃತಜ್ಞತೆಯಿಂದ ನೆನಸಿದ್ದಾರೆ. ಈ ಅಭಿಪ್ರಾಯ ಹಿಂದೆಯೇ ನನ್ನ ಮನಸ್ಸಿನಲ್ಲಿ ಮೂಡಿದ್ದು ಅದನ್ನು ಮುತ್ತಣ್ಣನವರು ದೃಢಪಡಿಸಿದ್ದಾರೆ. (ಅದರ ವಿವರಗಳು ಬೇರೆ ಕಡೆ ಬಂದಿವೆ).

ಈ ಕೃತಿಗೆ ಮುನ್ನುಡಿ ಬರೆದಿರುವ ಪಿ.ಎನ್. ಓಕ್ ಹೇಳುತ್ತಾರೆ – "ಒಂದು ದೇಶದ ಚರಿತ್ರೆ ಎಂದರೆ ವೀರರ ಚರಿತ್ರೆ; ವೀರರೇ ನಿಜವಾದ ಚರಿತ್ರೆ ಬರೆಯಬಲ್ಲವರು". ಮುಂದುವರಿದು ಅವರು ಹೇಳುತ್ತಾರೆ – ಭಾರತದ ಚರಿತ್ರೆಯನ್ನು ಇತಿಹಾಸಕಾರರು ವಿರೂಪಗೊಳಿಸಿದ್ದಾರೆ. ಮುಸ್ಲಿಮರ ಘೋರ ಕೃತ್ಯಗಳನ್ನು ಮುಸ್ಲಿಮರೇ ಹಿಂದೆ ದಾಖಲಿಸಿದ್ದರೂ ಅವುಗಳನ್ನು ಇತಿಹಾಸಕಾರರು ಸರಿಯಾಗಿ ಬಳಸಿಕೊಳ್ಳುತ್ತಿಲ್ಲ. ಹಿಂದಿನ ಪಶ್ಚಿಮ ಏಷಿಯಾ ಮುಸ್ಲಿಂ ಧಾಳಿಕಾರರ ಧಾಳಿಯನ್ನೇ ಟಿಪ್ಪು ಮುಂದುವರಿಸಿದ. ಟಿಪ್ಪು ತನ್ನ ಬೆಂಬಲಕ್ಕಾಗಿ ಆಫ್ಘಾನಿಸ್ತಾನ್, ಇರಾನ್‌ಗಳ ಸಹಾಯವನ್ನು ಯಾಚಿಸಿದ. ಕಲೀಫನ ಬಳಿಗೆ ತನ್ನ ರಾಯಭಾರಿಗಳನ್ನು ಕಳುಹಿಸಿದ್ದ. ಅವನು ಖಂಡಿತ 'ಸ್ವಾತಂತ್ರ್ಯ ಹೋರಾಟಗಾರ" ಅಲ್ಲ.



ಮುತ್ತಣ್ಣನವರು ಸಮಗ್ರ ವಸ್ತುನಿಷ್ಠ ಮಾಹಿತಿಯೊಡನೆ ಈ ವಿಸ್ತೃತ ಕೃತಿ ಬರೆದಿದ್ದಾರೆ. ದೆಹಲಿಯ ಷಹ ಅಲ್ಲಾಮನ ಆಸ್ಥಾನದಲ್ಲಿ ಬಾಲ ಮುಕುಂದದಾಸ್, ಹೈದರಾಬಾದಿನ ನಿಜಾಮನ ಆಸ್ಥಾನದಲ್ಲಿ ಸುಖರಾಮ್ ಪಂಡಿತ್ ಹೀಗೆ ಹಲವು ಭಾರತದ ಮುಸ್ಲಿಂ ದೊರೆಗಳ ಆಸ್ಥಾನದಲ್ಲಿ ಹಿಂದುಗಳಿದ್ದರು. ಹಲವು ಮುಸ್ಲಿಂ ಧಾಳಿಕಾರರು ಲಕ್ಷಾಂತರ ಹಿಂದೂಗಳನ್ನು ಕೊಂದಿದ್ದಾರೆ. ಅವರೆಲ್ಲ 'ವ್ಯಾಘ್ರ' ಗಳಾದರೆ ಟಿಪ್ಪುವೂ ವ್ಯಾಘ್ರ. ಹೈದರಾಲಿಯು ಮೈಸೂರು ರಾಜರ ಎಲ್ಲ ಅಧಿಕಾರ ಅಪಹರಿಸಿ ತಾನೇ ಸರ್ವಾಧಿಕಾರಿಯಾದ. "ಹೈದರನ ವಿಜಯಗಳಿಂದ ಅಲ್ಲಾನ ಧರ್ಮವು ವಿಶ್ವವನ್ನು ಬೆಳಗಿಸಿತು". ವೈಯಕ್ತಿಕವಾಗಿ ಅವನು ಕ್ರೂರಿ, ಭಯೋತ್ಪಾದಕ. 1782ರಲ್ಲಿ ಹೈದರ್ ನಿಧನಾನಂತರ ಅವನ ಮಗ ಟಿಪ್ಪು ಸರ್ವಾಧಿಕಾರಿ ಮಾತ್ರವಲ್ಲ. ತಾನು "ಪಾದಷಾಹ"ಎಂದು ಘೋಷಿಸಿಕೊಂಡ. ಅವನು ತನ್ನ ರಾಜ್ಯವನ್ನು ಇಸ್ಲಾಮೀಕರಣಗೊಳಿಸಲು ಯತ್ನಿಸಿದ. ಬ್ರಿಟಿಷರು ಭಾರತದ ಯಾವುದೇ ಊರಿನ ಹೆಸರನ್ನೂ "ಕ್ರಿಸ್ತೀಕರಣ" ಮಾಡಲಿಲ್ಲ; ಆದರೆ ಟಿಪ್ಪು ಹಲವು ಪ್ರಮುಖ ಊರುಗಳ ಹೆಸರುಗಳನ್ನು ಇಸ್ಲಾಮೀಕರಣ ಮಾಡಿದ. ಉದಾಹರಣೆಗೆ,

ಮೈಸೂರು –ನಜರಾಬಾದ್
ಮಂಗಳೂರು – ಜುಮ್ಮಲಾಬಾದ್
ಧಾರವಾಡ – ಖುರ್ಷೀದ್ ಸಾವದ್
ಹಾಸನ – ಖರೀಮಾಬಾದ್
ಕುಂದಾಪುರ – ನಸ್ರುಲ್ಲಾಬಾದ್
ಮೊಳಕಾಲ್ಮೂರ – ಮುಹಮ್ಮದಾಬಾದ್
ಮಡಕೇರಿ –ಜಫರಾಬಾದ್
ಶಿರಾ– ರುಸ್ತುಮಾಬಾದ್

(ಮುತ್ತಣ್ಣ ಕೊಟ್ಟಿರುವ ಕೆಲವೇ ನಲವತ್ತು ಹೆಸರುಗಳಲ್ಲಿ ಮೇಲಿನವು ಕೆಲವು ಮಾತ್ರ. ಉತ್ತರ ಭಾರತದಲ್ಲೂ ಮುಸ್ಲಿಂ ದೊರೆಗಳು ಹಾಗೆ ಬದಲಾಯಿಸಿದ್ದರು. ಕಾಶಿ– ಮುಹಮ್ಮದಾಬಾದ್, ಪ್ರಯಾಗ– ಅಲಹಾಬಾದ್). ಟಿಪ್ಪುಗೆ ಅಧಿಕೃತ ಅಂಕಿ ಅಂಶ ಪ್ರಕಾರ, ಹನ್ನೆರಡು ಗಂಡುಮಕ್ಕಳಿದ್ದು ಅವರಲ್ಲಿ ಪ್ರತಿಯೊಬ್ಬರಿಗೂ ನಾಲ್ಕರಿಂದ ಹದಿನಾಲ್ಕು ಮಕ್ಕಳಿದ್ದರು. ಅವನ ಹಲವರು ಪತ್ನಿಯರು ಬಲವಂತವಾಗಿ ಅವನ ಅಂತಃಪುರಕ್ಕೆ ಸೇರಿಸಲ್ಪಟ್ಟವರು ಮತ್ತು ಅವರಲ್ಲಿ ಹಲವರು ಹಿಂದೂ ಸ್ತ್ರೀಯರಿದ್ದರು. (ಅವನ ಹನ್ನೆರಡು ಮಕ್ಕಳಲ್ಲಿ ಮಹಮ್ಮದ್ ಹೆಸರಿನವರಿದ್ದರೂ ಅವರಲ್ಲಿ ಯಾರು "His Highness prince Gholam Mohammed", ತನ್ನ ತಂದೆ ಬಗ್ಗೆ ಬರೆದ ಪುಸ್ತಕವನ್ನು ತಿದ್ದಿಕೊಟ್ಟವನು, ಎಂಬುದನ್ನು ಗುರುತಿಸಲಾಗುತ್ತಿಲ್ಲ.

ಅವನು ವಿದೇಶಿ ಮುಸ್ಲಿಂ ದೊರೆಗಳಿಗೆ ಬರೆದ ಹಲವು ಪತ್ರಗಳಲ್ಲಿ ಇದೂ ಒಂದು – "1,00,000 followers of faith (= ಮುಸ್ಲಿಮರು) had determined to slay their (=ಕಾಫಿರರ) wives and families with their own hands" (ಒಂದು ಲಕ್ಷ ಮುಸ್ಲಿಮರು ಹಿಂದೂಗಳ ಕ್ರಿಶ್ಚಿಯನ್ನರ ಹೆಂಡಿರು ಮಕ್ಕಳನ್ನು ತಮ್ಮ ಕೈಯಿಂದಲೆ ಕೊಲ್ಲಲು ನಿರ್ಧರಿಸಿದ್ದಾರೆ, ಅವನ ಕಾಲದಲ್ಲಿ ತೀರ ಬಡ ಹೀನಸ್ಥಿತಿಗೆ ಬಂದಿದ್ದ ಹಲವರನ್ನು ಟಿಪ್ಪುವು ಸಿಪಾಯಿಗಳನ್ನಾಗಿ ಪರಿವರ್ತಿಸಿ, ಮತಾಂತರಗೊಳಿಸಿ ಇಸ್ಮಾಯಿಲ್, ಖರೀಂ, ಹಕೀಂ, ಹಸನ್, ಯೂಸುಫ್, ಅಬ್ದುಲ್ಲ ಇತ್ಯಾದಿ ಹೆಸರುಗಳನ್ನು ಕೊಟ್ಟು ಅವರ ಬದುಕು ತಕ್ಕ ಮಟ್ಟಿಗೆ ಸುಧಾರಿಸುವಂತೆ ಮಾಡಿದ. ಮೈಸೂರಲ್ಲಿ ಹಲವು ಕಾಲ ವಾಸವಾಗಿದ್ದ ಟಿಪ್ಪು ಕಾಲದ ಫ್ರೆಂಚ್ ರಾಯಭಾರಿ ಅಬ್ಬೆ ದುಬಾಯಿ ಮಾತುಗಳು ಇವು – "Thousands of Hindus were converted by Tipu Sultan. While the Christians, who were converted to the Islam were reconverted to Christianity, the Hindu converts remained as Muslims whose number eventually increased". (ಬಹುಶಃ ಟಿಪ್ಪು ಸಾವಿನ ಬಳಿಕ ಬರೆದ ಮಾತುಗಳಿರಬಹುದು. ಕ್ರಿಶ್ಚಿಯನ್ ಧರ್ಮದಲ್ಲಿ ಮತಾಂತರಕ್ಕೆ ಅವಕಾಶವಿರುವುದರಿಂದ ಮುಸಲ್ಮಾನರಾಗಿ ಪರಿವರ್ತನಗೊಂಡ ಕ್ರಿಶ್ಚಿಯನ್ನರು ಕ್ರಿಶ್ಚಿಯನ್ನರಾಗಿ ತಮ್ಮ ಪೂರ್ವ ಧರ್ಮಕ್ಕೆ ಮತಾಂತರಗೊಂಡರು. ಆದರೆ ಹಿಂದೂ ಧರ್ಮದಲ್ಲಿ ಮತಾಂತರಕ್ಕೆ ಅವಕಾಶವಿಲ್ಲವಾದುದರಿಂದ ಮುಸ್ಲಿಮರಾದ ಹಿಂದೂಗಳು ಮುಸಲ್ಮಾನರಾಗಿಯೇ ಉಳಿದರು. ಇದು ಸ್ವಾಭಾವಿಕ. ಮೇಲಿನ ಸಂಕ್ಷಿಪ್ತ ಮಾಹಿತಿ ಮೂಲ I.M. Muthanna: Tippu Sultan X'Rayed, 1980)

**II. ಎಚ್.ಡಿ.ಕರ್ಮಾ ಅವರ ಪುಸ್ತಕದಿಂದ :**

ಕ್ರಿ.ಶ. 1760ರಿಂದ ಮದ್ರಾಸಿನ ಬ್ರಿಟಿಷರಿಗೂ ಹೈದರನಿಗೂ ತಿಕ್ಕಾಟ ಆರಂಭವಾಗಿ ಅದು ಕೊನೆಗೊಂಡಿದ್ದು ಟಿಪ್ಪು ಸಾವಿನಲ್ಲಿ (1799). ಇಮ್ಮಡಿ ಕೃಷ್ಣರಾಜ ಒಡೆಯರ್‌ಗೆ ಇಬ್ಬರು ಮಕ್ಕಳು. ಕೃಷ್ಣರಾಜ ಒಡೆಯರ್ ತೀರಿದ ಮೇಲೆ ಸರ್ವಾಧಿಕಾರಿಯಾಗಿದ್ದ ಹೈದರ್ ಹಿರಿಯನನ್ನು ಬಿಟ್ಟು ನಾಲ್ಕು ವರ್ಷಗಳ ಕಿರಿಯನನ್ನು ಸಿಂಹಾಸನದ ಮೇಲೆ ಕೂರಿಸಿದ. ಅವನು 1770ರಲ್ಲಿ ತೀರಿ ಹೋದನು. ವಿಧವೆ ಲಕ್ಷ್ಮೀ ಅಮ್ಮಣ್ಣಿ ಹಿರಿಯ ಮಗ ಬೆಟ್ಟದ ಚಾಮರಾಜ ಒಡೆಯರನ್ನು ರಾಜನನ್ನಾಗಿ ಮಾಡಿದಳು. ಅವನೂ ತೀರಿ ಹೋದ ಮೇಲೆ 1776ರಲ್ಲಿ ಹೈದರನು ರಾಜಮನೆತನದ ತನಗೆ ಬೇಕಾದ ಒಬ್ಬನನ್ನು ಆರಿಸಿ ಪಟ್ಟದಲ್ಲಿ ಕೂರಿಸಿ ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಅವನ ಪೋಷಕವಾಗದಂತೆ ತಡೆದನು. ಅಲ್ಲಿಂದ ಹೈದರನ ಸರ್ವಾಧಿಕಾರ ಆರಂಭವಾಯಿತು. ಅವಳು ತನ್ನ ನೋವನ್ನು ಇಂಗ್ಲೀಷರಿಗೆ ತಿಳಿಸಬೇಕಾಯ್ತು. ಮುಂದೆ ಹೈದರ್ ತೀರಿದ ಮೇಲೆ ಟಿಪ್ಪು ಮೈಸೂರು ರಾಜ್ಯಕ್ಕೇ ತಾನೇ ನವಾಬ ಎಂದು ಘೋಷಿಸಿಕೊಂಡು ಮುಂದೆ ತನ್ನ ಘೋರ ಕೃತ್ಯಗಳನ್ನು ಮುಂದುವರಿಸಿದ. ಅವನದು ದಕ್ಷಿಣ ಭಾರತವನ್ನು ಇಸ್ಲಾಮೀಕರಣ ಮಾಡುವ ಉದ್ದೇಶ. ಕಾಫೀರರನ್ನು ಕೊಲ್ಲಲು ಮತಾಂತರಿಸಲು ಹೇಸಲಿಲ್ಲ. ಅವನು ಹೆಚ್ಚಾಗಿ ಆ ಕೆಲಸ



ಮಾಡಲಿಲ್ಲ ಮೈಸೂರು ಪ್ರದೇಶದಲ್ಲಿ. ಕಾರಣ ಜನ ರಾಜರಿಗೆ ವಿಧೇಯರಾಗಿದ್ದರು. ಅವನು ಕೊಡಗು ಮಲಬಾರ್ ಪ್ರದೇಶಗಳಲ್ಲಿ ಅಂತಹ ಕೆಲಸಗಳನ್ನು ಮಾಡಿದ. (ಉದಾಹರಣೆಗೆ – ಅವನು ಕಲ್ಲಿಕೋಟೆ ಸೇನಾಪತಿಗಳಿಗೆ ಬರೆದಿರುವ ಪತ್ರಗಳು). ಅವನು ಮುಸ್ಲಿಂ ಅಂಧಾಭಿಮಾನಿ ಆಗಿದ್ದರೂ, ಮೌಲ್ವಿಗಳಿಗಿಂತ ಬ್ರಾಹ್ಮಣ ಜ್ಯೋತಿಷಿಗಳಲ್ಲಿ ಹೆಚ್ಚು ವಿಶ್ವಾಸವಿದ್ದುದರಿಂದ ತನ್ನ ಬರಲಿರುವ ಅನಿಷ್ಟಗಳನ್ನು ದೂರ ಮಾಡಲು ಹಿಂದೂ ಧಾರ್ಮಿಕ ಸಂಸ್ಥೆಗಳಿಗೆ ದತ್ತಿಗಳನ್ನು ನೀಡಿದ ಅವನನ್ನು ದಕ್ಷಿಣದ ಘಜ್ನಿ, ಔರಂಗಜೇಬ್ ಎಂದು ಅವನನ್ನು ಕೆಲವರು ಬಣ್ಣಿಸಿರುವುದು ಸರಿಯಾಗಿದೆ. ಅವನು "ರಾಷ್ಟ್ರವಾದಿ" (Nationalist) ಅಲ್ಲ. ಅವನಿಗಿಂತ ಹಿಂದೆ ಭಾರತವು ಹಲವು ಹೋಳುಗಳಾಗಿ ಒಡೆದಿತ್ತು. ಅವನನ್ನು ಸೋಲಿಸಿದ ಬ್ರಿಟಿಷರ ತರುವಾಯ ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತವು ಒಂದು 'ರಾಷ್ಟ್ರ' ಎಂಬ ಪರಿಕಲ್ಪನೆ' ರಾಷ್ಟ್ರೀಯ ಮನೋಭಾವ, ರಾಷ್ಟ್ರ ಭಕ್ತಿ ಭಾರತೀಯರಲ್ಲಿ ಮೊಳೆತವು. ಕಿರ್ಕ್ ಪಾಟ್ರಿಕ್, 1790ರಲ್ಲಿ ಟಿಪ್ಪು ಅಧಿಕಾರಿಯಾಗಿದ್ದವನ ಪ್ರಕಾರ, "ಟಿಪ್ಪುವಿನ ಮನೋಧರ್ಮ ಸಹಜವಾಗಿಯೇ ಕ್ರೂರ: ಅವನದು ಸೇಡಿನ ಸ್ವಭಾವ; ಅವನು ಸುಳ್ಳುಗಾರ, ಮೋಸಗಾರ. ಇತರ ಧರ್ಮದವರು ಮತಾಂತರಗೊಳ್ಳಲು ಒತ್ತಾಯ ಪಡಿಸುತ್ತಾನೆ". ಟಿಪ್ಪುವಿನ ಸಮಕಾಲೀನ ಹುಸೇನ್ ಆಲಿ ಖಾನ್ ಕಿರ್ಮಾನಿ ಹೇಳುವಂತೆ "ಅವನು ಸಜ್ಜನನಾಗಿದ್ದರೂ ಅನ್ಯ ಧರ್ಮೀಯರ ಬಗ್ಗೆ ತೀವ್ರ ಅಸಹನೆ ಇತ್ತು. ಅವನದು ಮಹಮ್ಮದ್ ಧರ್ಮದ ರಕ್ಷಣೆ ಮತ್ತು ಸೂನಿ ('ಸುನ್ನಿ' ಇಸ್ಲಾಮಿನ ಒಂದು ಪ್ರಭೇದ, ಷಿಯಾದಂತೆ) ಪದ್ಧತಿಯ ರಕ್ಷಣೆಯ ಧ್ಯೇಯವಾಗಿತ್ತು". ಚಿತ್ರ ಸ್ಪಷ್ಟವಾಗಿದೆ. ಭಾರತದ ಇತಿಹಾಸದಲ್ಲಿ ಅವನದೊಂದು ಕಪ್ಪು ಚುಕ್ಕೆ. ಬಾಲ್ಯದಲ್ಲಿ ಧರ್ಮಾಂಧತೆಯನ್ನು ಬೋಧಿಸಿದ ಮೌಲ್ವಿಯಿಂದ ಅವನು ಒಬ್ಬ ಧರ್ಮಾಂಧ, ಕ್ರೂರಿ ಆದ. ಬಹು ಚಾಣಾಕ್ಷ, ಕಷ್ಟ ಸಹಿಷ್ಣು ಜೀವಿಯಾಗಿದ್ದ. ಅವನು ಬೆಳಿಗ್ಗೆ ಬೇಗ ಎದ್ದು ದಿನದಲ್ಲಿ ಹನ್ನೆರಡು ಹದಿನೈದು ಗಂಟೆ ಕೆಲಸ ಮಾಡುತ್ತಿದ್ದ. ಅವನ ಅಪಾರ ಮುಸ್ಲಿಂ ಪ್ರೇಮ ಮತ್ತು ಅಷ್ಟೇ ಪ್ರಮಾಣದ ಹಿಂದೂಗಳ ಮೇಲಿನ ಅತ್ಯಾಚಾರಗಳು ಅವನ ಶಕ್ತಿಯನ್ನು ಕಳೆಗುಂದಿಸಿದುವು. ಇಲ್ಲದಿದ್ದರೆ ಅವನೊಬ್ಬ ಶ್ರೇಷ್ಠ ರಾಜನಾಗಿ ಒಳ್ಳೆ ಯಶಸ್ಸನ್ನು ಪಡೆಯುತ್ತಿದ್ದ. (H.D. Sharma :The Real Tippu).

**ಎಚ್.ಎಲ್. ನಾಗೇಗೌಡರ ಕೃತಿಯಿಂದ.**

"ಟಿಪ್ಪುವಿನ ಖೈದಿಗಳು" (Tippu's war prisoners and his Dungeons - collected by H.L. Nage Gowda) ಎನ್ನುವ ಕೃತಿಯು ಕರ್ಮಾ ಅವರ The Real Tipu ಕೃತಿಯ ಭಾಗವಾಗಿ ಪ್ರಕಟಗೊಂಡಿದ್ದು ಅದರಲ್ಲಿನ ಮಾಹಿತಿ ಇದು.

ಜೇಮ್ಸ್ (ಟಿಪ್ಪುವಿನ ಸೆರೆಯಲ್ಲಿದ್ದವ) ಇಂಗ್ಲೆಂಡಿನಲ್ಲಿ ಜನಿಸಿದವನು. ಮುಂದೆ ಭಾರತದಲ್ಲಿ ಅವನನ್ನು ಫಿರಂಗಿ ದಳಕ್ಕೆ ಸೇರಿಸಲಾಯಿತು. ಟಿಪ್ಪು ಕಡೆಯವರು ಯುದ್ಧದಲ್ಲಿ ನಿರತನಾದ ಅವನ ಕಾಲಿಗೆ ಕಬ್ಬಿಣದ ಬೇಡಿ ಹಾಕಿ ಕಟ್ಟಿ ಸೆರೆಯಲ್ಲಿಟ್ಟು ದಿನಕ್ಕೆ ಸ್ವಲ್ಪ ಊಟ ಹಾಕಲಾಗುತ್ತಿತ್ತು.

ಅವನ ಶಿಶ್ನಚ್ಛೇದ ಮಾಡಿ ಹಲವರು ಯುರೋಪಿಯನ್ನರ ಜೊತೆ ಮತಾಂತರ ಮಾಡಲಾಯ್ತು. 1784ರಲ್ಲಿ ನಲವತ್ತು ಸಾವಿರ ಕ್ರಿಶ್ಚಿಯನ್ ಗಂಡಸರು ಹೆಂಗಸರನ್ನು ಮಹಮ್ಮದೀಯ ಮತಕ್ಕೆ ಸೇರಿಸಲಾಯ್ತು. ಮತಾಂತರ ಪ್ರತಿಭಟಿಸಿದ ಹಲವರನ್ನು ಕೊಲ್ಲಲಾಯ್ತು. ಒಬ್ಬನ ಮೂಗು ಕಿವಿ ಕತ್ತರಿಸಿ ಕತ್ತೆಯ ಮೇಲೆ ಹಿಮ್ಮುಖವಾಗಿ ಕುಳ್ಳಿರಿಸಿ ಶ್ರೀರಂಗಪಟ್ಟಣದಲ್ಲಿ ಮೆರವಣಿಗೆ ಮಾಡಲಾಯ್ತು. ಹಿಂದೂಗಳನ್ನು ಹಿಂಸಿಸುವುದು, ಅವರ ದೇವಾಲಯ ಧ್ವಂಸ ಅವನಿಗೆ ಆಪ್ಯಾಯಮಾನವಾದ ಕೆಲಸ ಆಗಿತ್ತು. ದೇವರುಗಳ ಮುಂದೆ ಗೋಗಳನ್ನು ಕಡಿಯುತ್ತಿದ್ದ. ಹಿಂದೂಗಳನ್ನು ಕಂಡರೆ ಭಾರಿ ದ್ವೇಷ ಇತ್ತು. ಭಾರತೀಯರು ಮೆತ್ತನೆಯ ಸೋಮಾರಿ ಜನವಾದ್ದರಿಂದ ಟಿಪ್ಪುವಿನ ದ್ವೇಷಕ್ಕೆ ಪ್ರತಿಯಾಗಿ ಏನೂ ಮಾಡಲಾರದೆ ಒಳಗೊಳಗೇ ಕುದಿಯುತ್ತಿದ್ದರು. ಹಿಂದೂಗಳು ದಯಾಪರರು, ಯೂರೋಪಿಯನ್ನರಿಗೆ ಅನ್ನ ಆಹಾರ ಇಲ್ಲದಿದ್ದರೆ ಅನ್ನ ಕೊಟ್ಟು ಕಾಪಾಡಿದ್ದಾರೆ. ಒಮ್ಮೆ ಹಳ್ಳಿಯಲ್ಲಿ ಸಿಕ್ಕಿದ ಮುದುಕಿ ಏಳು ದಿನ ಉಪವಾಸವಿದ್ದ ನನಗೆ ಮರುಗಿ ರಾಗಿಮುದ್ದೆ ಹುರುಳಿಕಾಳು ಸಾರು ಕೊಟ್ಟಳು. ಟಿಪ್ಪು ಕಡೆಯವರು ಕೆಲವು ವರ್ತಕರನ್ನು ಬೆಳಿಗ್ಗೆ ಸಂಜೆ ತನಕ ನೆಲದಲ್ಲಿ ಮಲಗಿಸಿ ಕೈಕಾಲುಗಳಿಗೆ ಗೂಟ ಹೊಡದು ಒಂದೇ ಸಮನೆ ಚೂಪಾಚ ದಬ್ಬಳಗಳಿಂದ ಚುಚ್ಚುತ್ತಿದ್ದರು.

ಅನಾಮಧೇಯ ಸೈನ್ಯಾಧಿಕಾರಿ ಬರೆದ ವ್ಯಥೆಯ ಕಥೆ: ಹೈದರ್‌ನ ಕಾಲದಲ್ಲಿ ತಲೆಗಡುಕರು ಹತ್ತು ಫಿರಂಗಿಯವರ ತಲೆ ಕಡಿದು ಬೇಕೆಂದೇ ಇಂಗ್ಲಿಷ್ ಸೈನ್ಯಾಧಿಕಾರಿಗಳ ಮುಂದೆ ಎಸೆದರು. ಜೈಲಿನಲ್ಲಿ ಖೈದಿಗಳು ಇದ್ದ ಕೊಠಡಿಗಳಲ್ಲೇ ಪಾಯಖಾನೆ ಮಾಡಬೇಕಿತ್ತು. 1784ರಲ್ಲಿ ಸೆರೆಯಿಂದ ಬಿಡುಗಡೆಯಾಗಿ ಇಂಗ್ಲೆಂಡಿಗೆ ತೆರಳಿದ ಜೇಮ್ಸ್ ಸ್ಕೂರಿಯ ಅನುಭವಗಳು: ಹೈದರಾಲಿಯ ಕಾಲದಲ್ಲಿ ಚಿಲ್ಲೆಂಬ್ರೂ ಕೋಟೆಯ ಸೆರೆಯಲ್ಲಿದ್ದ ಜನರು ಸತ್ತಾಗ ಮಲದ ಮೇಲೆ ಬಿದ್ದಿದ್ದ ಅವರ ಮಾಂಸವನ್ನೇ ಕೈದಿಗಳು ತಿನ್ನುತ್ತಿದ್ದರು. ಟಿಪ್ಪು ಮಲಬಾರ್ ಪ್ರದೇಶದ ಮೂವತ್ತು ಸಾವಿರ ಜನರನ್ನು ಬಲಾತ್ಕಾರದಿಂದ ಶ್ರೀರಂಗಪಟ್ಟಣಕ್ಕೆ ತರಿಸಿ, ಗಂಡಸರನ್ನು ಮತಾಂತರ ಪಡಿಸಿ ಸೈನ್ಯಕ್ಕೆ ಸೇರಿಸಿಕೊಂಡ. ತನ್ನ ಹುಲಿಯನ್ನು ಇಷ್ಟ ಪಡುತ್ತಿದ್ದ ಅವನು ಒಂಬತ್ತು ಹುಲಿ ಬೋನುಗಳನ್ನು ಇರಿಸಿ ಹಲವರನ್ನು ಆ ಬೋನುಗಳಿಗೆ ದೂಡಿ ಹುಲಿಗಳಿಗೆ ಆಹಾರ ಒದಗಿಸುತ್ತಿದ್ದ. ಹಲವರ ಮೂಗು ಕಿವಿ ಕತ್ತರಿಸಿ ಬಜಾರಿನಲ್ಲಿ ಅವನ್ನು ಪ್ರದರ್ಶಿಸುತ್ತಿದ್ದ.

**1784ರಲ್ಲಿ ಟಿಪ್ಪು ಸೆರೆ ಹಿಡಿದ ಕ್ರೈಸ್ತರು ಎಂಬ ಕೃತಿಯಿಂದ** : 1784 ಫೆಬ್ರವರಿ 24ರ ಬೂದಿ ಬುಧವಾರ (Ash Wednesday) ಟಿಪ್ಪು ಸಿಪಾಯಿಗಳು ಕರಾವಳಿ ಪ್ರದೇಶದ ಕ್ರೈಸ್ತ ಧರ್ಮದ ಅರವತ್ತು ಸಾವಿರ ಜನರನ್ನು ಸೆರೆ ಹಿಡಿದು ಕಟುಕರು ಕುರಿಗಳನ್ನು ಹಿಂಡು ಹಿಂಡಾಗಿ ಕರೆತರುವಂತೆ ತಂದು ಶ್ರೀರಂಗಪಟ್ಟಣದಲ್ಲಿ ಸೆರೆಯಲ್ಲಿ ಹಾಕಿದರು. ಹಸಿವು ತಾಳಲಾರದೆ ಹಲವರು ಸತ್ತರು. ಹಲವರನ್ನು ಜಮಾಲಾಬಾದ್ ಕೋಟೆಯಿಂದ ಕೆಳಕ್ಕೆ ಎತ್ತಿ ಹಾಕಿ ಸಾಯಿಸಲಾಯ್ತು. ಲಕ್ಷಗಟ್ಟಲೆ ಸೆರೆಹಿಡಿದ ಕ್ರೈಸ್ತರ ಐದು ಲಕ್ಷ ರೂಪಾಯಿ ಆಸ್ತಿಯನ್ನೆಲ್ಲ



ಬೇರೆಯವರಿಗೆ (ಮುಸ್ಲಿಮರಿಗೆ) ಹಂಚಲಾಯ್ತು. ಕ್ರೈಸ್ತರ ಮಂಗಳೂರು ಚರ್ಚುಗಳನ್ನು ಕೆಡವಿಸಿದ. ಮಿಲಾಗ್ರಿಸ್ ಚರ್ಚ್ ಕೆಡವಿ ಅದರ ಕಲ್ಲುಗಳ ಮೇಲೆ "ನಮಾಜ್" (ನಮಾಜ್ ಮಾಡುವ ಸ್ಥಳ) ನಿರ್ಮಾಣವಾಯಿತು.ಅದೇ ಈಗಿನ "ಈದ್ಗಾ ಹಿಲ್". ಕಾರವಾರದ ಬಳಿಯ ಒಂದು ಚರ್ಚ್‌ಗೂ ಇದೇ ಗತಿಯಾಯ್ತು. ಅದನ್ನು ಕುದುರೆ ಲಾಯವಾಗಿ ಮಾಡಿ, ಮುಂದೆ ಅದರ ಕಲ್ಲುಗಳಲ್ಲಿ ಮಸೀದಿ ಕಟ್ಟಲಾಯ್ತು. ಕೆನರಾ(ಮಂಗಳೂರು) ಪ್ರದೇಶದಿಂದ ಸೆರೆ ಹಿಡಿಯಲ್ಪಟ್ಟ ಕ್ರೈಸ್ತರು ಹಲವರು ಹೊಟ್ಟೆಗಿಲ್ಲದೆ ಸತ್ತರು. ಅನೇಕರನ್ನು ಮತಾಂತರಗೊಳಿಸಲಾಯ್ತು. "ಜನಾನಾ"ಕ್ಕೆ ಹುಡುಗಿಯರನ್ನು ಸೇರಿಸಿಕೊಳ್ಳುವುದು ಮುಸಲ್ಮಾನರ ನೀತಿಯಾಗಿತ್ತು. ಹಲವು ಕ್ರೈಸ್ತರು ಹೆದರಿ ಕೊಡಗಿಗೆ ಓಡಿ ಹೋದಾಗ ಕೊಡಗಿನ ರಾಜ ಅವರನ್ನು ಗೌರವದಿಂದ ಕಂಡು ಜೀವನೋಪಾಯಕ್ಕೆ ಅವಕಾಶ ನೀಡಿ ಚರ್ಚುಗಳನ್ನು ಕಟ್ಟಿಸಿಕೊಟ್ಟ.

ಇದು ಟಿಪ್ಪುವಿನ ಸೆರೆಯಾಳುಗಳಲ್ಲಿ ಕೆಲವರ ದುಃಖದ ಅನುಭವಗಳ ಕೆಲವು ಅಂಶಗಳು ಮಾತ್ರ. ಇನ್ನೂ ನೂರಾರು ದಿಗಿಲು ಬೀಳಿಸುವ ಸಂಗತಿಗಳಿವೆ. ತಿಳಿಯಬಯಸುವವರು ಮೂಲ ಕೃತಿಗಳನ್ನೇ ಓದಬೇಕು.

**"Tipu Sultan : A great Martyr" ಕೃತಿಯಿಂದ**

1992ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯವು ಏರ್ಪಡಿಸಿದ್ದ ವಿಚಾರಗೋಷ್ಠಿಯಲ್ಲಿ ಮಂಡಿತವಾಗಿರುವ ಸಂಪ್ರಬಂಧಗಳು 1993ರಲ್ಲಿ ಅದೇ ಬೆಂಗಳೂರು ವಿಶ್ವವಿದ್ಯಾಲಯದಿಂದ ಖ್ಯಾತ ಇತಿಹಾಸಕಾರ ಡಾ. ಬಿ. ಷೇಕ್ ಆಲಿಯವರ ಸಂಪಾದಕತ್ವದಲ್ಲಿ ಪ್ರಕಟವಾಗಿದೆ. ಅದರಿಂದ ಕೆಲವು ಅಂಶಗಳನ್ನು ಹೆಕ್ಕಿ ತೆಗೆದು ಅವುಗಳ ಬಗ್ಗೆ ನನ್ನ ಪ್ರತಿಕ್ರಿಯೆಯನ್ನು ತಿಳಿಸಲಾಗಿದೆ. ಸಂಪಾದಕರು ಆರಂಭದ ಟಿಪ್ಪಣಿಯಲ್ಲಿ ಟಿಪ್ಪು ತನ್ನ ರಾಜ್ಯವನ್ನು ಬ್ರಿಟಿಷರ ನೊಗದಿಂದ ಬಿಡಿಸಲು ಯತ್ನಿಸಿದ ಕಾರಣ, ತನ್ನ ಪ್ರಜೆಗಳ ಕ್ಷೇಮಕ್ಕಾಗಿ ಬಹುವಾಗಿ ಶ್ರಮಿಸಿದ ಟಿಪ್ಪುವು ಸ್ಮರಣೀಯ ಎಂದಿದ್ದಾರೆ. (ಟಿಪ್ಪಣಿ: ಅವನಂತೆಯೇ ಹಲವರು ಬ್ರಿಟಿಷರ ನೊಗದಿಂದ ಬಿಡಿಸಿಕೊಳ್ಳಲು ಯತ್ನಿಸಿದ್ದಾರೆ – ಉದಾಹರಣೆಗೆ ಬಂಗಾಳದ ಸಿರಾಜುದ್ದೀನ್, ಮಹಾರಾಷ್ಟ್ರದ ಪೇಷ್ವೆಗಳು. ತಮ್ಮ ರಾಜ್ಯಗಳನ್ನು ಅನ್ಯ ರಾಜರಿಂದ ಉಳಿಸಿಕೊಳ್ಳಲು ಭಾರತದ ಎಲ್ಲ ರಾಜರೂ ಯುದ್ಧ ಮಾಡಿದ್ದಾರೆ. ಅದಕ್ಕಾಗಿ ಮಾತ್ರ ಅವರು ವಿಶೇಷ ಸ್ಮರಣೀಯರಲ್ಲ). ಮುಂದೆ ಇಲ್ಲಿ ಕೆಲವು ಇತಿಹಾಸಕಾರರ ಸಂಪ್ರಬಂಧಗಳನ್ನು ಮಾತ್ರ ಉಲ್ಲೇಖಿಸುತ್ತೇನೆ.

1) ಟಿಪ್ಪು ಸುಲ್ತಾನನ ಸಮಾಜಸುಧಾರಣೆ ಬಗ್ಗೆ ಡಾ. ಬಿ. ಷೇಕ್ ಆಲಿ ಬರೆಯುತ್ತ ಅವನು ತನ್ನ ರಾಜ್ಯದ ಆರ್ಥಿಕ ಸ್ಥಿತಿ ಉತ್ತಮ ಪಡಿಸಲು ಬಂಜರು ಭೂಮಿಯನ್ನು ಉಳುಮೆ ಭೂಮಿಯನ್ನಾಗಿ ಪರಿವರ್ತಿಸಲು ಯತ್ನಿಸಿದ; ಶ್ರೀಮಂತ ಬಡವ ಎಂಬ ಭೇದಭಾವ ಹೋಗಲಾಡಿಸಿಲು ಯತ್ನಿಸಿದ ; ಹಣವನ್ನು ಇಟ್ಟವರಿಗೆ ಶ್ರೀಮಂತರಿಂದ ವರ್ಷದ ಕೊನೆಯಲ್ಲಿ

ಲಾಭದ ಒಂದು ಭಾಗ ಸಮೇತ ಆ ಹಣವನ್ನು ಹಿಂದಿರುಗಿಸಿಸಲು ವ್ಯವಸ್ಥೆ ಮಾಡಿದ; (ಬ್ಯಾಂಕಿಗ್ ವ್ಯವಸ್ಥೆಗೆ ಇದು ನಾಂದಿ); ಅನೇಕ ದೇಶಗಳೊಡನೆ ವ್ಯಾಪಾರ ಮಾಡಿದ; (ಬ್ಯಾಂಕಿಂಗ್ ವ್ಯವಸ್ಥೆಗೆ ಇದು ನಾಂದಿ); ಅನೇಕ ದೇಶಗಳೊಡನೆ ವ್ಯಾಪಾರ ಸಂಬಂಧ ಬೆಳಸಿದ. ಒಳ್ಳೆಯ ರಸ್ತೆಗಳನ್ನು ತೋಟಗಳನ್ನು ಮಾಡಿಸಿದ. ಕೃಷ್ಣರಾಜಸಾಗರ ಕಟ್ಟಿಸಿದ; ರೈತರೇ ಹೊಲ ಉಳಬೇಕಾಗಿಲ್ಲ; ಪಟೇಲರೇ ಸ್ವತಃ ಹೊಲ ಉಳಬೇಕೆಂದು ಆದೇಶಿಸಿ ಬಲಾತ್ಕಾರ ಕಾರ್ಮಿಕ ಸೇವೆಯನ್ನು ತಪ್ಪಿಸಿದ. ಕಾಡು ಪ್ರಾಣಿಗಳನ್ನು ರಕ್ಷಿಸಿದ; ತೀವ್ರ ಧರ್ಮಾಭಿಮಾನಿಯಾದ ಅವನು ನಾಣ್ಯಗಳನ್ನು ಟಂಕಿಸಿ ಅವುಗಳಿಗೆ ಅಹ್ಮದಿ, ಸಿದ್ದಿಕಿ, ಉಸ್ಮಾನಿ, ಹೈದರಿ, ಇಮಾಮಿ, ಅಬಿದಿ, ಬಕ್ರಿ, ಜಫರಿ, ಕಜಿಮಿ,ಖಿಜ್ರಿ ಎಂಬ ಇಸ್ಲಾಮ್ ಅಭಿವೃದ್ಧಿಗೆ ಕಾರಣರಾದವರ ಹೆಸರುಗಳನ್ನು ಟಂಕಿಸಿದ. ಶ್ರೀರಂಗಪಟ್ಟಣ ಸೇರಿದಂತೆ ಚಿತ್ರದುರ್ಗ, ಧಾರವಾಡ ಇತ್ಯಾದಿ ಜಾಗಗಳಲ್ಲಿ ಟಂಕಶಾಲೆಗಳಿದ್ದವು. ಊರ ಹೆಸರುಗಳನ್ನು ಪರ್ಷಿಯನ್ ಭಾಷೆಗೆ ಪರಿವರ್ತಿಸಿದ. ತಂಬಾಕು, ಮದ್ಯಪಾನ ನಿಷೇಧಿಸಿದ. ದಿಂಡಿಗಲ್‌ನ ಕೋಟೆಯಲ್ಲಿ ಹಿಂದೂ ದೇವಾಲಯವಿದೆ ಎಂಬ ಕಾರಣಕ್ಕೆ ಕೋಟೆಯನ್ನು ಧ್ವಂಸ ಮಾಡಲಿಲ್ಲ, ಶ್ರೀರಂಗಪಟ್ಟಣದಲ್ಲಿ ಜಮಿಯಲ್ ಉಮುರ್ ಹೆಸರಿನ ವಿಶ್ವವಿದ್ಯಾಲಯ ಸ್ಥಾಪಿಸುವ ಬಯಕೆ ಇತ್ತು. ಅವನು ಮಾಡಿದ್ದೆಲ್ಲವೂ ನೂತನ. ಅವನ ಮಾಹಾತ್ಮ್ಯವನ್ನು ನಿರಾಕರಿಸಲಾಗುವುದಿಲ್ಲ. ಸಾಕ್ರಟೀಸ್ ವಿಷ ಕುಡಿಯಬೇಕಾಯ್ತು. ಜೀಸಸ್ ಕ್ರಾಸ್ ಏರಬೇಕಾಯ್ತು; ಕರ್ಬಾಲದಲ್ಲಿ ಇಮಾಮ್ ಹುಸೇನ್ ಹತ್ಯೆಗೆ ಒಳಗಾದ; ಜಾನ್ ಆಫ್ ಆರ್ಕ್, ಏಬ್ರಹಾಂ ಲಿಂಕನ್, ಗಾಂಧೀಜಿ ಅವರೆಲ್ಲ ತಮ್ಮ ಕಾಲದ ಕ್ರೂರ ಹಸ್ತಗಳಿಗೆ ಒಳಗಾದರೂ ಅವರೆಲ್ಲ ಮನುಷ್ಯನ ಚರಿತ್ರೆಯ ಇತಿಹಾಸದಲ್ಲಿ ಬೆಳಗುವ ನಕ್ಷತ್ರಗಳು. ಟಿಪ್ಪು ಅದೇ ವರ್ಗಕ್ಕೆ ಸೇರಿದವನು. ಉನ್ನತ ಧ್ಯೇಯಕ್ಕಾಗಿ ಮಡಿದ ಟಿಪ್ಪು ಯಾವುದೋ ಕ್ಷಣದಲ್ಲಿ ಮಡಿದು ಇತಿಹಾಸದಲ್ಲಿ ಚಿರವಾಗಿ ಬಾಳಿದ.

(ಟಿಪ್ಪಣಿ : ಡಾ. ಷೇಕ್ ಅಲಿ ಟಿಪ್ಪುವಿನ ಒಳ್ಳೆಯ ಕೆಲಸಗಳ ಬಗ್ಗೆ ಮಾಡಿರುವ ಗುಣಗಾನ ಸಾಧಾರವಾಗಿದ್ದಿರಬಹುದು ಅದನ್ನು ನಾನು ಅಲ್ಲಗಳೆಯುವುದಿಲ್ಲ. ಅವನು ಉದಾತ್ತ ಧ್ಯೇಯಕ್ಕಾಗಿ ಮಡಿದನೇ, ತನ್ನ ರಾಜ್ಯ ಉಳಿಸಿಕೊಳ್ಳಲು ಮಡಿದನೇ? ಖಂಡಿತ ಅವನೊಬ್ಬ ತ್ಯಾಗಿಯೂ ಅಲ್ಲ, ಮಹಾ ದೇಶಭಕ್ತನೂ ಅಲ್ಲ. ಅವನು ಊರ ಹಿಂದಿನ ಹೆಸರುಗಳನ್ನು ಇಸ್ಲಾಮೀಕರಣಗೊಳಿಸುವ ಅಗತ್ಯವಿತ್ತೇ? ಅವನು ಮೈಸೂರು ಪ್ರದೇಶದಲ್ಲಿ ಭೂ ಸುಧಾರಣೆ ಮಾಡಿರಬಹುದು. ಇಲ್ಲಿಯೂ ಅದರಿಂದ ಮುಸ್ಲಿಮರಿಗೆ ಹೆಚ್ಚು ಲಾಭವಾಗಿರುವ ಸಾಧ್ಯತೆ ಇದೆ. ಆದರೆ ಕರಾವಳಿ ಪ್ರದೇಶದಲ್ಲಿ ಹಿಂದೂಗಳ ಜಮೀನುಗಳನ್ನು ಕಿತ್ತುಕೊಂಡು ಮುಸ್ಲಿಮರಿಗೆ ಹಂಚಿದ್ದು ವಾಸ್ತವ. ಅದರ ಅರ್ಥ ಏನು? ದಿಂಡಿಗಲ್ ದೇವಾಲಯ ಉಳಿಸಿರಬಹುದು, ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ದೇವಾಲಯದಂತೆ. ಆದರೆ ಶ್ರೀರಂಗಪಟ್ಟಣದ ಆಂಜನೇಯ ಸ್ವಾಮಿ ಹಾಳು ಮಾಡಿದಂತೆ ನೂರಾರು ದೇವಾಲಯಗಳನ್ನು ಹಾಳು ಮಾಡಿದ. ಅವನ ಮಗ ಪರಿಷ್ಕರಿಸಿದ ಕೃತಿಯಲ್ಲೇ ಎರಡು ದೇವಾಲಯ ಬಿಟ್ಟು ತನ್ನ



ರಾಜ್ಯದ ಎಲ್ಲ ದೇವಾಲಯಗಳನ್ನು ನಾಶಪಡಿಸಲು ಆದೇಶಿಸಿದ್ದಾನೆ. ಅವನ ಶಾಸನಗಳು, ಖಡ್ಗದ ಬರಹ, ಬರೆದ ಪತ್ರಗಳು ಇವೆಲ್ಲ ಹಿಂದೂಗಳನ್ನು (ಕಾಫೀರರನ್ನು) ಕೊಲ್ಲಲು ಆದೇಶಿಸಿವೆ. ಈ ಬಗ್ಗೆ ಡಾ. ಷೇಕ್ ಆಲಿ ಚಕಾರ ಎತ್ತಿಲ್ಲ. ಅದು ಸ್ವಾಭಾವಿಕ).

2) ಬಿ.ಎನ್. ಪಾಂಡೆ ಲೇಖನದಿಂದ : Tipu : A Democrat and Humanist. ಡಾ. ಬಿ.ಎನ್. ಪಾಂಡೆಯವರು 1927 – 8ರ ಸುಮಾರಿನಲ್ಲಿ "ಟಿಪ್ಪು ಸುಲ್ತಾನನ ಧಾರ್ಮಿಕ ನೀತಿ" ಬಗ್ಗೆ ಬರೆದ ಲೇಖನವು ಕಲ್ಕತ್ತದ ಮೆಟ್ರಿಕ್ಯುಲೇಷನ್‌ದ ಪಠ್ಯಪುಸ್ತಕದಲ್ಲಿದ್ದು "ಟಿಪ್ಪುವು ಮೂರು ಸಾವಿರ ಬ್ರಾಹ್ಮಣರನ್ನು ಇಸ್ಲಾಮಿಗೆ ಮತಾಂತರಿಸಲು ಯತ್ನಿಸಿದಾಗ ಅವರು ಒಪ್ಪದೆ ಆತ್ಮ ಹತ್ಯೆ ಮಾಡಿಕೊಂಡರು"ಎಂಬ ವಾಕ್ಯವು ವಿವಾದಕ್ಕೊಳಗಾಗಿ, ಅಂತಿಮವಾಗಿ ಆ ಪಾಠವನ್ನು ಪಠ್ಯಪುಸ್ತಕದಿಂದ ತೆಗೆದುಹಾಕಲಾಯ್ತು ಎಂಬ ಸಂಗತಿ ಗಮನಾರ್ಹ. 1930ರಲ್ಲಿ ಗಾಂಧೀಜಿ ಬರೆದ ಲೇಖನದಲ್ಲಿ ಟಿಪ್ಪುವು ಹಿಂದೂ ದೇವಾಲಯಗಳಿಗೆ ಉದಾರವಾಗಿ ದತ್ತಿ ನೀಡಿರುವುದು ಅವನ ಉದಾತ್ತ ಮನಸ್ಸಿನ ದ್ಯೋತಕ ಎಂದು ಹೇಳಿರುವುದು ದಾಖಲಾಗಿದೆ. ಟಿಪ್ಪು ಒಬ್ಬ ದೊಡ್ಡ "Martyr" ಅಥವಾ ಹುತಾತ್ಮ, ಟಿಪ್ಪುವನ್ನು ಮತಾಂಧ ಎಂದು, ಮುಸಲ್ಮಾನ್ ದೊರೆಗಳೆಲ್ಲ ಅದೇ ಸ್ವಭಾವದವರು ಎಂದು ಕೆಲವರು ಹೇಳಿರುವುದು ಹಿಂದೂ ಮುಸ್ಲಿಂ ವಿರಸಕ್ಕೆ ಕಾರಣ. ಟಿಪ್ಪು ಒಬ್ಬ ಸ್ವಧರ್ಮ ಪ್ರೇಮಿ; ಆದರೆ ಮತಾಂಧ ಅಲ್ಲ ಎಂದು ಗಾಂಧೀಜಿ ಹೇಳಿದ್ದಾರೆ. ಪಾಂಡೆ ಪ್ರಕಾರ, ಟಿಪ್ಪು ಕೊಡಗಿನ ಹಿಂದೂಗಳನ್ನು ಮಂಗಳೂರಿನ ಕ್ರಿಶ್ಚಿಯನ್ನರನ್ನು ಮಲಬಾರಿನ ನಾಯರ್‌ಗಳನ್ನು ನಾಶಪಡಿಸಿದ್ದಕ್ಕೆ ಕಾರಣ ಅವರು ಬ್ರಿಟಿಷರ ಜೊತೆ ಶಾಮೀಲಾಗಿ ಟಿಪ್ಪುವಿನ ಅಧಿಕಾರವನ್ನು ತುಳಿದುಹಾಕಲು ಯತ್ನಿಸಿದ್ದು. ಅವರಂತೆಯೇ, ಮಲಬಾರಿನ ಮಾಪಿಳ್ಳೆಗಳನ್ನು (ಇವರು ಮತಾಂತರಗೊಂಡ ಮುಸ್ಲಿಮರು). 1794ರ ಎಡ್ವರ್ಡ್ ಮೂರ್ ಹೇಳುವಂತೆ, ಟಿಪ್ಪು ಕಾಲದ ಮೈಸೂರು ರಾಜ್ಯದಲ್ಲಿ ಓಡಾಡಿದರೆ ಸುಸಂಸ್ಕೃತ ಜನರು ಕೈಗಾರಿಕೆಗಳನ್ನು ಬೆಳೆಸಿ ಶ್ರೀಮಂತರಾಗಿ ಸುಖವಾಗಿ ಬದುಕಿದ್ದರು. ಇದಕ್ಕೆ ಕಾರಣ ಟಿಪ್ಪು ಆಡಳಿತ. ಪಾಂಡೆ ಪ್ರಕಾರ ದೇವತೆಗಳಿಗೆ ನರವಧೆ ಕೊಡುವುದನ್ನು ನಿಲ್ಲಿಸಿದ.ಮದ್ಯಪಾನ ನಿಷೇಧಿಸಿದ, ಭಂಗಿ ಸಸ್ಯಗಳನ್ನು ಬೆಳೆಸುವುದನ್ನು ತಡೆದ. ಅವನ ಕಾಲದಲ್ಲಿ ಪೂರ್ಣಯ್ಯ, ಅಪ್ಪಾಜಿರಾಮ್, ಶ್ರೀನಿವಾಸರಾವ್, ಮೂಲ್ ಚಂದ್, ಸುಜನರಾವ್‌ರಂತಹ ಹಿಂದೂ ವ್ಯಕ್ತಿಗಳು ಉನ್ನತ ಸ್ಥಾನವನ್ನಲಂಕರಿಸಿದ್ದರು. ಅವನು ಗೋವಾದ ಚರ್ಚ್ ಬಿಷಪ್‌ರನ್ನು ಮೈಸೂರಿನ ಕ್ರಿಶ್ಚಿಯನ್ನರಿಗೆ ಧರ್ಮಬೋಧನೆ ಮಾಡಲು ಕೇಳಿಕೊಂಡ.

(ಟಿಪ್ಪಣಿ : ಗಾಂಧೀಜಿಯವರ ಕಾಲಕ್ಕೆ ಟಿಪ್ಪುವಿನ ನಿಜವಾದ ಸಂಗತಿ ಅಷ್ಟು ಗೊತ್ತಿರಲಿಲ್ಲ. ಈಗಿನಂತೆ. ಬಂಗಾಳದ ಪಠ್ಯಪುಸ್ತಕದಲ್ಲಿ ಅವನ ಬಗ್ಗೆ ಪಾಠವೊಂದು ಸೇರಿತ್ತು ಎಂಬುದು ಗಮನೀಯ. ಇಪ್ಪತ್ತನೇ ಶತಮಾನದ ಹೊತ್ತಿಗೆ ಟಿಪ್ಪು ಭಾರತಾದ್ಯಂತ ವಿಖ್ಯಾತನಾಗಿದ್ದ – ಕರ್ನಾಟಕದ ಪುಲಕೇಶಿ, ವಿಷ್ಣುವರ್ಧನ, ಕೃಷ್ಣ ದೇವರಾಯರಂಥವರ ಪರಿಚಯ ಇರಲಿಲ್ಲ;

ಇದಕ್ಕೆ ಅವನು ಮುಸ್ಲಿಂ ಆಗಿದ್ದುದು ಕಾರಣ. ಕೊಡಗಿನ, ಮಲಬಾರಿನ ಹಿಂದೂಗಳನ್ನು ಕ್ರಿಶ್ಚಿಯನ್ನರನ್ನು ಕೊಲ್ಲಿಸಲು ಕಾರಣ ಅವರು ಬ್ರಿಟಿಷರ ಜೊತೆ ಶಾಮೀಲಾಗಿದ್ದುದು ಅಲ್ಲ. ಸಾಮೂಹಿಕವಾಗಿ ಅವರು ಯಾರೂ ಬ್ರಿಟಿಷರಿಗೆ ಸಹಾಯ ಮಾಡಲಿಲ್ಲ.ಟಿಪ್ಪು ಶಾಸನಗಳಲ್ಲಿ ಎಲ್ಲಿಯೂ ಬ್ರಿಟಿಷರ ಜೊತೆ ಶಾಮೀಲಾದ ವಿಷಯ ಇಲ್ಲವೇ ಇಲ್ಲ – ಅಲ್ಲಿರುವುದು ಒಟ್ಟಾರೆ ಕಾಫೀರರನ್ನು ಕೊಲ್ಲಲು ಆದೇಶ. ಬ್ರಿಟಿಷರ ಆಡಳಿತದ ಕಾಲದಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ನಿರತರಾಗಿದ್ದವರು ಬೀದಿಯಲ್ಲಿ ಪ್ರತಿಭಟನೆ ಮಾಡಿದರೆ ಮಾತ್ರ ಜೈಲಿಗೆ ಹಾಕುತ್ತಿದ್ದರು. ಮಾನಸಿಕವಾಗಿ ಬ್ರಿಟಿಷರ ವಿರುದ್ಧ ಇದ್ದವರನ್ನು ಜೈಲಿಗೆ ಹಾಕಲಿಲ್ಲ – ಯಾರನ್ನೂ ಕೊಲ್ಲಲೂ ಇಲ್ಲ. ಟಿಪ್ಪುವಿಗೆ ಜನರು ಯಾರೇ ಆಗಿರಲಿ – ಬ್ರಿಟಿಷರ ಪರ, ವಿರೋಧ ಇರುವರೋ ಇಲ್ಲವೋ ಮುಖ್ಯವಾಗಿರಲಿಲ್ಲ. ಅವರು ಮುಸ್ಲಿಮರೇ "ಕಾಫಿರ"ರೇ ಎಂಬುದು ಮಾತ್ರ ಮುಖ್ಯವಾಗಿತ್ತು. ಅದರಲ್ಲೂ ಮೈಸೂರು, ಶ್ರೀರಂಗಪಟ್ಟಣ ಹೊರತುಪಡಿಸಿ. ಈಗಾಗಲೇ ನಾನು ಸ್ಪಷ್ಟ ಪಡಿಸಿರುವಂತೆ ಅವನ ಕ್ರೌರ್ಯವೆಲ್ಲ ದೂರದ ಕೊಡಗು ಮಲಬಾರ್ ಪ್ರದೇಶದಲ್ಲಿ ನಡೆಯಿತು. ಈಚೆಗೆ ನನಗೆ ಕೊಡಗಿಗೇ ಹೋಗಿ ಅಲ್ಲಿನ ಜನರ ಜೊತೆ ಮತನಾಡಿಕೊಂಡು ಬಂದವರಿಂದ ತಿಳಿದದ್ದು – ಈಗಲೂ ಕೊಡಗಿನ ಎಷ್ಟೋ ಜನ ಟಿಪ್ಪು ಎಂದರೆ ಸಾಕು–ಕೆಂಡವಾಗುತ್ತಾರೆ. ಟಿಪ್ಪು ಮೂರು ಸಾವಿರ ಬ್ರಾಹ್ಮಣರನ್ನು ಕೊಂದದ್ದು ನಿಜ. ಅವರೇ ಬಹುಶಃ ಏಳುನೂರು ಮಂಡ್ಯ ಅಯ್ಯಂಗಾರ್ ಮನೆತನ.

3). ಸೈಯದ್ ಆಜಾಮ್ ಅವರ Religious policy of Tipu Sultan : an examination of a stereotype ಲೇಖನದಿಂದ. ಟಿಪ್ಪುವಿನ ಧಾರ್ಮಿಕ ಮನೋಧೋರಣೆ ಮಲಬಾರಿನ ನಾಯರರ ಬಗ್ಗೆ, ಕೊಡಗಿನ ಕೊಡವರ ಬಗ್ಗೆ, ದಕ್ಷಿಣ ಕನ್ನಡದ ಕ್ರಿಶ್ಚಿಯನ್ನರ ಬಗ್ಗೆ ಮತ್ತು ಮಹಮ್ಮದೀಯರ ಬಗ್ಗೆ. ಅವರ ಮೇಲೆ ತೀವ್ರ ಶಿಕ್ಷೆಗಳನ್ನು ವಿಧಿಸಿದ್ದಕ್ಕೆ ಕಾರಣ ಅವರ ದ್ರೋಹ, ಅವಿಧೇಯತೆ ಎಂಬ ಕಾರಣ ನೀಡಿ ಟಿಪ್ಪು ಒಬ್ಬ ಕ್ರೂರಿ ಎಂದು ಬಿಂಬಿಸಲಾಗಿದೆ. ಇದು ಬ್ರಿಟಿಷ್ ಇತಿಹಾಸಕಾರರ ಸ್ಪಷ್ಟ ನೀತಿ – ಬ್ರಿಟಿಷರ ನೀತಿ: "ನಾವೇ ವಿಶ್ವವನ್ನು ಆಳಬೇಕು" ಎಂಬುದು ಪ್ರಸಿದ್ಧ. ಟಿಪ್ಪು ಉದ್ದೇಶ ರಾಜಕೀಯ ಸುಧಾರಣೆ ಮಾತ್ರ ಆಗಿತ್ತು. ಬ್ರಿಟಿಷರಿಗೆ ಅಥವಾ ಯುರೋಪಿಯನ್ನರಿಗೆ ಧಾರ್ಮಿಕ ಅಸಹನೆ, ಮತಾಂಧತೆ ರಕ್ತಗುಣ, ಭಾರತದ ರಾಜರ ಮೇಲೆ ಆ ಗುಣ ಹೊರಿಸಿದವರು. ಟಿಪ್ಪುವನ್ನು ಅದೇ ಬಣ್ಣ ಲೇಪಿಸಿ ಚಿತ್ರಿಸಿದರು. ಹನ್ನರಡನೆಯ ಶತಮಾನದಲ್ಲಿ ಹಲವರು ವೀರಶೈವರಾದುದು ರಾಜರಿಂದ ಪ್ರಚೋದಿತವಲ್ಲ. ಟಿಪ್ಪು ಸುಲ್ತಾನನಲ್ಲಿ ಮತಾಂತರಿಸುವ ಉದ್ದೇಶವಿರಲಿಲ್ಲ.

(ಟಿಪ್ಪಣಿ : ಕೊಡಗು, ಮಲಬಾರ್‌ಗಳಲ್ಲಿ ಟಿಪ್ಪು ಕ್ರೌರ್ಯ ಕಾರ್ಯಗಳನ್ನು ಮಾಡಲು ಕಾರಣ ಅಲ್ಲಿಯವರು ಬ್ರಿಟಿಷರ ಪರವಾಗಿದ್ದರು ಎಂಬುದಕ್ಕೆ ಕಾರಣಗಳಿಲ್ಲ. ಟಿಪ್ಪುವಿನ ಮಗ ಪರಿಷ್ಕರಿಸಿರುವ ಕೃತಿಯಲ್ಲಿ ಎಲ್ಲಿಯೂ ಅದಕ್ಕೆ ಸೂಚನೆಗಳಿಲ್ಲ. ಅವನು ಕೊಂದ ಲಕ್ಷಾಂತರ ಹಿಂದೂಗಳು



ಕ್ರಿಶ್ಚಿಯನ್ನರು "ಬ್ರಿಟಿಷರ ಪರವಾಗಿದ್ದರು"ಎಂಬ ಮಾತನ್ನು ಟಿಪ್ಪು ಎಲ್ಲಿಯೂ ಹೇಳಿಲ್ಲ. ಹಿಂದೂ ದೇವಾಲಯಗಳನ್ನು ನಾಶಪಡಿಸಲು ಆದೇಶ ನೀಡಿದಾಗ, ಅವು ಬ್ರಿಟಿಷರ ಪರವಾಗಿದ್ದುವು ಎಂದು ಹೇಳಲು ಸಾಧ್ಯವೇ? ಟಿಪ್ಪುವೇ ತನ್ನ ಸೇನಾಪತಿಗಳಿಗೆ ಬರೆದಿರುವ ಪತ್ರಗಳಲ್ಲಿ ಎಲ್ಲಿಯೂ ಬ್ರಿಟಿಷರ, ಆಂಗ್ಲರ ಸೂಚನೆಗಳಿಲ್ಲ. "ಕಾಫಿರರನ್ನು ಕೊಲ್ಲು" ಎಂದರೆ ಮುಸ್ಲಿಮರಲ್ಲದವರನ್ನು ಕೊಲ್ಲು ಎಂದೇ ಅರ್ಥ. ಟಿಪ್ಪು ಸೆರೆಮನೆಯಲ್ಲಿದ್ದ ಐರೋಪ್ಯರ ಬರಹಗಳಲ್ಲಿಯೂ ಅದರ ಸೂಚನೆಗಳಿಲ್ಲ. ಟಿಪ್ಪುವನ್ನು ಟೀಕಿಸಿದವರೆಲ್ಲ ಬ್ರಿಟಿಷ್ ಪರ ಎಂದು ವಾದಿಸುವುದು ಅಪಹಾಸ್ಯದ ಮಾತು. ಬ್ರಿಟಿಷರ ಕಾಲದಲ್ಲಿ ಮತಾಂತರಗಳು ನಡೆದರೂ ಅವು ಹಿಂಸಾತ್ಮಕ ಆಗಿರಲಿಲ್ಲ. ಆಮಿಷಗಳನ್ನು ಒಡ್ಡಿ ಅವರು ಮತಾಂತರಿಸಿದರು. (ಮತಾಂತರವನ್ನು ನಾನು ಕೆಲವಡೆ ತೀವ್ರವಾಗಿ ಖಂಡಿಸಿದ್ದೇನೆ). ಹನ್ನೆರಡನೆಯ ಶತಮಾನದಲ್ಲಿ ಹಲವರು ವೀರಶೈವರಾದುದು ರಾಜ ಭಯದಿಂದ ಅಲ್ಲ, ಆಮಿಷದಿಂದಲೂ ಅಲ್ಲ – ಕೇವಲ ಶ್ರದ್ಧೆಯಿಂದ, ಮನಪೂರ್ವಕವಾಗಿ. ಪಂಪನ ತಂದೆ ಬ್ರಾಹ್ಮಣನಾಗಿದ್ದವನು ಜೈನನಾಗಲು ಕಾರಣ ಜೈನ ಧರ್ಮ ಅವನಿಗೆ ಹೆಚ್ಚು ಪ್ರಿಯವಾಗಿ ಕಂಡುದುದರಿಂದ: ಇದನ್ನು ಪಂಪನೇ ಸ್ವತಃ ಹೇಳಿಕೊಂಡಿದ್ದಾನೆ. ಆದರೆ ಟಿಪ್ಪು ಕ್ರಿಶ್ಚಿಯನ್ನರನ್ನು, ಹಿಂದೂಗಳನ್ನು ಮತಾಂತರಿಸಲು ಆದೇಶಿಸಿದ. ಟಿಪ್ಪುವಿನ ಆದೇಶಗಳೂ ಅದನ್ನೇ ಸ್ಪಷ್ಟಪಡಿಸುತ್ತವೆ).

(4) ಸೈಯದ್ ದಾವೂದ್ ಅಫ್ರಾಷ್ ಅವರ Hukmnama, A valuble Contemproary Persian Manuscript ಎಂಬ ಲೇಖನದಿಂದ ಮಾಹಿತಿ. ಹುಕುಮ್‌ನಾಮ ಎಂಬ ಪರ್ಷಿಯನ್ ಭಾಷೆಯ ಹಸ್ತಪ್ರತಿಯು ಕ್ರಿ.ಶ. 1787ರಲ್ಲಿ ರಚಿತವಾಗಿದ್ದು ಅದರಲ್ಲಿ ಟಿಪ್ಪುವು ಅಸಫ್ (ಪ್ರಾದೇಶಿಕ ಮುಖ್ಯಾಧಿಕಾರಿ) ಅಮಿಲ್‌ನಾದ, ಶಿರಸ್ತೇದಾರರಿಗೆ ಕೊಟ್ಟ ಆದೇಶಗಳಿವೆ. ಅದರಲ್ಲಿನ ಕ್ಯಾಲೆಂಡರ್‌ನಲ್ಲಿ ಹಿಜ್ರಾ ಕ್ಯಾಲೆಂಡರ್‌ನಲ್ಲಿ ಇರುವುದಕ್ಕಿಂತ ಭಿನ್ನವಾದ ಹನ್ನೆರಡು ತಿಂಗಳುಗಳ ಹೆಸರುಗಳಿವೆ. ಆ ಹನ್ನೆರಡು ತಿಂಗಳುಗಳಲ್ಲಿ ಕೊನೆಯದು ಕಬ್ಬಾನಿ. ಟಿಪ್ಪುಗಿಂತ ಹಿಂದೆ ಸಂಖ್ಯೆಗಳನ್ನು ಎಡದಿಂದ ಬಲಕ್ಕೆ ಬರೆಯುತ್ತಿದ್ದರೆ ಟಿಪ್ಪುವಿನ ಕ್ಯಾಲೆಂಡರ್‌ನಲ್ಲಿ ಅವನ್ನು ಬಲದಿಂದ ಎಡಕ್ಕೆ ಬರೆಯಲಾಗಿದೆ. (ಇದು ಪರ್ಷಿಯನ್ ಭಾಷೆಯ ಪದ್ಧತಿ). ಉದಾಹರಣೆಗೆ, 5121 ನ್ನು 1215 ಎಂದು ಓದಿಕೊಳ್ಳಬೇಕು. ಪ್ರವಾದಿ ಮುಹಮ್ಮದನು ಕ್ರಿ.ಶ. 609ರಲ್ಲಿ ತಾನು ದೇವರ ವಾರ್ತಾವಾಹಕ ಎಂದು ಘೋಷಿಸಿಕೊಂಡ. (ಟಿಪ್ಪಣಿ : ಟಿಪ್ಪು ಆಡಳಿತ ಭಾಷೆ ಕನ್ನಡವನ್ನು ಬಿಟ್ಟು ಪರ್ಷಿಯನ್ ಭಾಷೆ ಬಳಸಿದ ಎಂಬುದು ಪ್ರಸಿದ್ಧ. ಅವನು ತಿಂಗಳುಗಳ ಹೆಸರುಗಳನ್ನು, ಶಕ ವರ್ಷವನ್ನೂ ಬದಲಿಸಿದ)

5). ಡಾ. ಡಿ.ವಿ. ದೇವರಾಜರ "The Sword of Tipu Sultan" ಲೇಖನದ ಮಾಹಿತಿ. ಟಿಪ್ಪುವಿನ ಖಡ್ಗ ಭಾರತದ ಸ್ವಾತಂತ್ರ್ಯವನ್ನು ಅಪಹರಿಸಿದವರನ್ನು ವಿರೋಧಿಸಿದುದರ ಸಂಕೇತ;ಅಷ್ಟೇ ಅಲ್ಲ, ಉಕ್ಕಿನ ಖಡ್ಗ ತಯಾರಿಕೆಯಲ್ಲಿ ಆಧುನಿಕತೆಯ ಸಂಕೇತ. ಟಿಪ್ಪುವಿನ ಹಲವು ಖಡ್ಗಗಳು

ದೊರೆತಿವೆ. ರಿಚ್‌ಮಂಡ್ ಡ್ಯೂಕ್‌ನಿಂದ ಮೈಸೂರು ಮಹಾರಾಜರಿಗೆ ನೀಡಲಾಗಿದ್ದ ಖಡ್ಗ 1920ರಲ್ಲಿ ಕಣ್ಮರೆಯಾಯಿತು. ಶಾಸನಗಳಿರುವ ಖಡ್ಗಗಳೂ ಇವೆ.

(ಟಿಪ್ಪಣಿ :ನಾನು ಈಗಾಗಲೇ ಟಿಪ್ಪು ಶಾಸನವಿರುವ ಖಡ್ಗವನ್ನು ಉಲ್ಲೇಖಿಸಿದ್ದರೂ ಅದರ ಮೇಲಿನ ಬರಹದ ವಿಷಯವನ್ನಾಗಲಿ ಪ್ರಾಮುಖ್ಯವನ್ನಾಗಲಿ ಡಾ. ದೇವರಾಜ್ ಗಮನಿಸಿಲ್ಲ.)

ಒಟ್ಟಾರೆ ನಾನು ಎಚ್ಚರಿಕೆಯಿಂದ ಪರಶೀಲಿಸಿದ್ದರಲ್ಲಿ ಮೇಲಿನ ಕೃತಿಯಲ್ಲಿ ಯಾರೂ ಟಿಪ್ಪು ಶಿಲಾ ಶಾಸನಗಳನ್ನು, ಖಡ್ಗದ ಮೇಲಿನ ಬರಹವನ್ನು, ಟಿಪ್ಪು ಬರೆದ ದಾಖಲೆಗಳನ್ನು, ಟಿಪ್ಪು ಮಗ  ಪರಿಷ್ಕರಿಸಿದ ಕೃತಿಯನ್ನು ಅಪ್ಪಿತಪ್ಪಿಯೂ ಲೆಕ್ಕಕ್ಕೆ ತೆಗೆದುಕೊಂಡಿಲ್ಲ. ಎಲ್ಲರ ಗಮನವು ಟಿಪ್ಪುನಲ್ಲಿ ಇಲ್ಲದ ಸೆಕ್ಯುಲರ್ ಮನೋಧರ್ಮದ ವೈಭವೀಕರಣ, ಅವನ ವ್ಯಾಪಾರ ಕೌಶಲ್ಯ, ಆಡಳಿತದ ರೀತಿ ಇತ್ಯಾದಿ ಕಡೆ ಮಾತ್ರ ಇದೆ. ಅವುಗಳ ಪ್ರಸ್ತಾಪ, ಚರ್ಚೆ ಖಂಡಿತ ನಡೆಯಬೇಕು – ಅದು ಇತಿಹಾಸ; ಹಾಗೆಯೇ ಅವನ ನಿಜವಾದ ಒಳ ಅಂತರಂಗ ವಾಸ್ತವವಾಗಿ ಏನಿತ್ತು, ಏನು ಮಾಡಿದ, ಏನು ಮಾಡಿಸಿದ ಎಂಬುದೂ ಪ್ರಸ್ತಾಪವಾಗಬೇಕಿತ್ತು.; ಅದೂ ಇತಿಹಾಸವೇ.

* * * *

## 12. ಟಿಪ್ಪುವಿನ ನಿಜ ಅಂತರಂಗ

"ಇತಿಹಾಸ" ಎಂಬುದು ಹಿಂದೆ ನಡೆದುದನ್ನು ಅದು ನಡೆದಂತೆಯೇ ಚಿತ್ರಿಸುವುದು. ಇತಿಹಾಸವು ವಸ್ತುನಿಷ್ಠ, ಮಾಹಿತಿನಿಷ್ಠ ಸತ್ಯವನ್ನು ಹೊರಹಾಕುವ ಸಂಶೋಧನೆಯನ್ನು ಅವಲಂಬಿಸಿದೆ. ಟಿಪ್ಪು ಬಗ್ಗೆ (1790) ಈಗಾಗಲೇ ನಾನು ವ್ಯಕ್ತಪಡಿಸಿರುವ ಸಂಗತಿಗಳಿಗೆ ಸ್ಪಷ್ಟ ಆಧಾರಗಳನ್ನು ನೀಡಿ ಪ್ರತಿಪಾದಿಸಿದ್ದೇನೆ. ನನಗೆ ಯಾವುದೇ ವ್ಯಕ್ತಿ ಅಥವಾ ಧರ್ಮದ ಬಗ್ಗೆ ಅಸಹನೆ, ದ್ವೇಷ ಇಲ್ಲ. "ಸತ್ಯಂ ವದ, ಧರ್ಮಂ ಚರ" (ಸತ್ಯವನ್ನು ಹೇಳು, ಧರ್ಮವನ್ನು ಅನುಸರಿಸು), "ಹುಸಿಯ ನುಡಿಯಲು ಬೇಡ", ಈ ಮಾತುಗಳು ನನಗೆ ಅನುಕರಣೀಯ, ಆದರ್ಶ – ಬರೀ ಮಾತುಗಳು ಅಲ್ಲ, ಅವು ನನ್ನ ಬದುಕಿನ ಭಾಗಗಳಾಗಿವೆ. ಈ ಮಾತನ್ನು ಹೇಳುವಾಗ ನನಗೆ ಯಾವುದೇ ಅಳುಕೂ ಇಲ್ಲ, ಏಕೆಂದರೆ ಅದು ವಾಸ್ತವ.

ಸಂಶೋಧನೆಯ ಉದ್ದೇಶ ಸತ್ಯವನ್ನು ಹೊರಗೆಡಹುವುದು. ಸಂಶೋಧನೆ ಅವಲಂಬಿಸಿರುವ ಮಾಹಿತಿಯು ಸ್ಥೂಲವಾಗಿ ಎರಡು ಬಗೆ – ಮೂಲಭೂತ ಮಾಹಿತಿ, ಆನುಷಂಗಿಕ ಮಾಹಿತಿ (Original source and Secondary source). ಇವುಗಳಲ್ಲಿ ಮೇಲ್ನೋಟಕ್ಕೇ ಕಾಣುವಂತೆ ಮೂಲಭೂತ ಮಾಹಿತಿಗೇ ಆದ್ಯತೆ – ಅದೇ ಹುದುಗಿರುವ ಸತ್ಯವನ್ನು ಎತ್ತಿ ತೋರಲು ಸಹಾಯಕ. ಸತ್ಯವನ್ನು ತಿರುಚಲು, ಮರೆಮಾಚಲು ನಿಜವಾದ ಸಂಶೋಧನೆ ಅವಕಾಶ ಮಾಡಿಕೊಡುವುದಿಲ್ಲ. ಅದು ವೈಜ್ಞಾನಿಕ ಸಂಶೋಧನೆ ಆಗಿರಬಹುದು, ಸಾಮಾಜಿಕ ಸಂಶೋಧನೆ ಆಗಿರಬಹುದು–ಎರಡಕ್ಕೂ ಅನ್ವಯವಾಗುತ್ತದೆ. ನಿಜವಾದ ಸಂಶೋಧಕ ತೆರೆದ ಮನಸ್ಸಿನವನೂ ಆಗಿರಬೇಕು, ನಿರ್ಭೀತನೂ ಆಗಿರಬೇಕು.

ಈಗ ಪ್ರಸ್ತುತ ಟಿಪ್ಪು ವಿಷಯಕ್ಕೆ ಬರೋಣ. ಅವನ ಅಂತರಂಗದ ವ್ಯಕ್ತಿತ್ವದ ಬಗ್ಗೆ ಸಕಾರಾತ್ಮಕ, ನಕಾರಾತ್ಮಕ ಬರಹಗಳು ಬಂದಿವೆ. ಅವನೊಬ್ಬ ಸರ್ವಧರ್ಮ ಪ್ರೇಮಿ, ಶೂರ, ದೇಶಪ್ರೇಮಿ ಎಂದು ಹಲವರು, ಅವನೊಬ್ಬ ಅನ್ಯಧರ್ಮ ದ್ವೇಷಿ, ಹಿಂಸಕ ಎಂದೂ ಕೆಲವರು ವಾದಿಸಿದ್ದಾರೆ. ಅವನೊಬ್ಬ ಶೂರ, ಚತುರ, ಹಠವಾದಿ ಎಂಬಲ್ಲಿ ಅನುಮಾನವಿಲ್ಲ. ಆದರೆ ಅವನ ನಿಜವಾದ ವ್ಯಕ್ತಿತ್ವ, ಧ್ಯೇಯ, ಸ್ವಭಾವ ಏನು ಎಂಬುದನ್ನು ಬಿಂಬಿಸಿರುವ ಮೂಲಭೂತ ಆಧಾರಗಳು ಹೀಗಿವೆ.

1. ಶ್ರೀರಂಗಪಟ್ಟಣದಲ್ಲಿ ಅವನೇ ಕಟ್ಟಿಸಿದ ಮಸೀದಿಯ ಗೋಡೆಯ ಮೇಲಿನ ಶಾಸನದ ಕನ್ನಡಾನುವಾದ ಹೀಗಿದೆ – "ಸಕಲ ಸಾಧನಗಳೊಡನೆ ಪ್ರವಾದಿ ಮಾಡಿದಂತೆ ಕಾಫಿರರ ಜೊತೆ ಹೋರಾಡು, ಅವರನ್ನು ನೀರಲ್ಲಿ ಮುಳುಗಿಸು, ಅವರ ಮರಗಳನ್ನು ಕಡಿ ಹೊಲಗಳನ್ನು ನಾಶಪಡಿಸು" (ಎಪಿಗ್ರಾಫಿಯ ಕರ್ನಾಟಿಕ, ಶ್ರೀರಂಗಪಟ್ಟಣದ 47ನೇ

ಶಾಸನ). ಈ ವಿಷಯದಲ್ಲಿ ಎಲ್ಲ ಮುಸ್ಲಿಮರೂ ಒಗ್ಗಟ್ಟಾಗಿರಬೇಕು ಎಂದೂ ಹೇಳುತ್ತದೆ. "ಕಾಫಿರ" ಎಂದರೆ ಮುಸ್ಲಿಂ ಅಲ್ಲದವನು. ಆ ಮಸೀದಿಯು ಅದಕ್ಕಿಂತ ಮುಂಚೆ ಇದ್ದ ಆಂಜನೇಯ ದೇವಾಲಯದ ಮೂರ್ತಿ ಕಿತ್ತುಹಾಕಿ ಕಟ್ಟಿದ್ದು ಎಂಬುದಕ್ಕೆ ಸಾಕ್ಷಿಯಾಗಿ ಆ ಮಸೀದಿಯ ಕೆಳಭಾಗದಲ್ಲಿ ಹಿಂದೂ ದೇವಾಲಯದ ಸ್ಪಷ್ಟ ಕುರುಹುಗಳಿವೆ. ಅಲ್ಲಿನ ಕಿತ್ತುಹಾಕಿದ ಆಂಜನೇಯನ ಮೂರ್ತಿಯನ್ನು ನಗರದ ಒಳಗೆ ಬೇರೊಂದು ದೇವಾಲಯದಲ್ಲಿ ಇಟ್ಟಿದ್ದಾರೆ. ಟಿಪ್ಪುವಿನ ಧರ್ಮಾಂಧತೆಯ ಕುರುಹುಗಳು ಅಲ್ಲಿನ ಇತರ ಶಾಸನಗಳಲ್ಲಿಯೂ ಇದೆ.

(2) ಅವನ ಸುಪ್ರಸಿದ್ಧ ಖಡ್ಗದ ಮೇಲಿನ ಪರ್ಷಿಯನ್ ಶಾಸನವನ್ನು ಹಯವದನರಾವ್ ತಮ್ಮ The History of Mysore (III) ಕೃತಿಯಲ್ಲಿ ಅನುವಾದಿಸಿದ್ದಾರೆ. ಅಲ್ಲಿನ ಒಂದು ವಾಕ್ಯ ಇದು. "My victorious sabre is lightning for the destruction of the unbelievers." (unbelievers = ಕಾಫಿರರು).

(3) ಟಿಪ್ಪುವೇ ಸ್ವತಃ ತನ್ನ ಕೈಯಿಂದ ಕೇರಳಕ್ಕೆ ಬರೆದ ಪರ್ಷಿಯನ್ ಪತ್ರಗಳು ಲಂಡನ್ನಿನಲ್ಲಿದ್ದು ಅವುಗಳನ್ನು ಮಲಯಾಳಂಗೆ ಅನುವಾದಿಸಿ ಡಾ. ಕೆ.ಎಂ. ಪಣಿಕ್ಕರರು "ಭಾಷಾಪೋಷಿಣಿ" ಯಲ್ಲಿ (ಆಗಸ್ಟ್ 1923) ಪ್ರಕಟಿಸಿದ್ದಾರೆ. ಆ ಪತ್ರಿಕೆಯ ಪ್ರತಿಯನ್ನು ಕಲ್ಲಿಕೋಟೆಯಿಂದ ಬೆಂಗಳೂರು ವಿಶ್ವವಿದ್ಯಾಲಯದ ಗ್ರಂಥಾಲಯದ ಮೂಲಕ ತರಿಸಿ, ಆ ಪತ್ರಗಳನ್ನು ಮಲಯಾಳಂ ಬಲ್ಲವರಿಂದ ಕನ್ನಡಕ್ಕೆ ಅನುವಾದ ಮಾಡಿಸಿದ್ದೇನೆ. (ಅವುಗಳನ್ನು ಇಂಗ್ಲಿಷ್‌ಗೆ ನನಗಿಂತ ಮೊದಲೇ ಡಾ.ಶರ್ಮಾ ಅವರು The Real Tippu ಕೃತಿಯಲ್ಲಿ ಅನುವಾದಿಸಿ ಕೊಟ್ಟಿದ್ದಾರೆ. ಆ ಪತ್ರಗಳಲ್ಲಿನ ವಿಷಯ ಇದು. 14.12.1788ರಲ್ಲಿ ಕಲ್ಲಿಕೋಟೆಯ ಸೇನಾಧಿಪತಿಗೆ ಬರೆದ ಪತ್ರದಲ್ಲಿ "ಮೀರ್ ಹುಸೇನ್ ಆಲಿಯ ಜೊತೆ ಸೇರಿ ಇಸ್ಲಾಂ ನಂಬದವರನ್ನೆಲ್ಲ ಕೊಲ್ಲಬೇಕು" ಎಂದು ಆದೇಶಿಸಿದ್ದಾನೆ. 22.3.1788ರಂದು ಅಬ್ದುಲ್ ಖಾದರನಿಗೆ ಬರೆದ ಪತ್ರ – "12000 ಹಿಂದೂಗಳನ್ನು ಮತಾಂತರಿಸಿದ್ದೇನೆ. ಇದರಲ್ಲಿ (ಬ್ರಾಹ್ಮಣ) ನಂಬೂದರಿಗಳು ಇದ್ದಾರೆ ಎಂಬುದನ್ನು ಎಲ್ಲರಿಗೂ ತಿಳಿಸು. ಸ್ಥಳೀಯ ಹಿಂದೂಗಳನ್ನೆಲ್ಲ ಇಸ್ಲಾಮಿಗೆ ಮತಾಂತರಿಸು". 19.1.1790ರಲ್ಲಿ ಬದ್ರೂಸ್ ಸಮನ್ ಖಾನ್‌ಗೆ ಬರೆದ ಪತ್ರ – "ನಾನು ಮಲಬಾರ್ ಜಯಿಸಿ ಬಹುದೊಡ್ಡ ಕೆಲಸಮಾಡಿದ್ದೇನೆ. ಈಗಾಗಲೇ ನಾಲ್ಕು ಲಕ್ಷಕ್ಕೂ ಮೀರಿದ ಹಿಂದೂಗಳನ್ನು ಮತಾಂತರಿಸಿದ್ದೇನೆ. ತಿರುವಾಂಕೂರಿನ ರಾಜನನ್ನು ಮತಾಂತರಿಸುವವರೆಗೆ ಶ್ರೀರಂಗಪಟ್ಟಣಕ್ಕೆ ಹೋಗುವುದಿಲ್ಲ." ಇಂತಹುದೇ ಇನ್ನೂ ಹಲವು ಅವನ ಪತ್ರಗಳಿವೆ.

ಮಲಬಾರ್ ಪ್ರದೇಶದಲ್ಲಿ ಟಿಪ್ಪು ನಡೆಸಿದ ಅನ್ಯಾಯಗಳ ವರದಿ ಕೇರಳದ ಚರಿತ್ರೆಯಲ್ಲಿ ಸಾಕಷ್ಟು ದೊರಕುತ್ತದೆ. ಪದ್ಮರಾಜ ಮೆನನ್‌ರ History of Kerala ದಲ್ಲಿನ ವಾಕ್ಯಗಳು –



"Tippu's persecution of the people made matters worse. His fanatic endeavours to convert the people to Islam were normally supported by his unscrupulous instruments. The sword or the Koran was the alternative offered. Every there the Hindus were persecuted and robbed of their women and their children...."

The History of Hyder Shah and of his Tippu Sultan (ಪರಿಷ್ಕರಣೆ : ಗುಲಾಂ ಮಹಮದ್ ಸುಲ್ತಾನ್) ಎಂಬ ಕೃತಿಯಲ್ಲಿ ಈ ಮಾತುಗಳಿವೆ. "He is also said to have carried away from the province of Malabar 70,00 Christians and to have made Musalmans of 1,00,000 Hindus........ It was probably about this time (1790) that he issued an edict for the destruction of all the Hindu temples in his dominion except Seringapatam and Mail Cotah". (ಶ್ರೀರಂಗಪಟ್ಟಣ, ಮೇಲ್ಕೋಟೆ).

ಮೇಲಿನ ಮಾಹಿತಿ ಅತ್ಯಂತ ವಿಶ್ವಾಸಪೂರ್ಣ, ನಿರ್ಣಾಯಕ ಸಾಕ್ಷ್ಯಾಧಾರ ಮತ್ತು ಅದು ಸ್ಪಷ್ಟವಾಗಿ ತಿಳಿಸಿವುದು ಟಿಪ್ಪುವಿನ ಘೋರ ಮತಾಂಧತೆಯನ್ನು. ಇಂದಿಗೂ ಶ್ರೀರಂಗಪಟ್ಟಣದ ಕೆಲವು ಕುಟುಂಬಗಳು ಟಿಪ್ಪು ಕಾಲದಲ್ಲಾದ ಅನ್ಯಾಯಗಳನ್ನು ನೆನೆಸಿಕೊಂಡು ದುಃಖಿಸುತ್ತವೆ.

ಅವನು ಮೇಲ್ಕೋಟೆ, ನಂಜನಗೂಡು, ಶ್ರೀರಂಗಪಟ್ಟಣ, ಶೃಂಗೇರಿ ಮಠ ದೇವಾಲಯಗಳಿಗೆ ದತ್ತಿ ಕೊಟ್ಟ ನಿಜ. ಯಾವುದೇ ರಾಜ ಕೇವಲ ದತ್ತಿ ಕೊಟ್ಟರೆ ಅದು ಅವನ ದೈವಭಕ್ತಿಯ ಸಂಕೇತವಾಗುವುದಿಲ್ಲ. – ಅದರ ಹಿಂದೆ ಬೇರೆ ಸ್ವಾರ್ಥದ ಉದ್ದೇಶವಿರಬಹುದು. ಇಂದಿನ ಅನೇಕ ರಾಜಕಾರಣಿಗಳು ದೇವಾಲಯಗಳಿಗೆ ಹೋಗಿ ಕಾಣಿಕೆ ಸಲ್ಲಿಸಿ ಬರುತ್ತಿರುವುದು ಆಗಾಗ್ಗೆ ಪತ್ರಿಕೆಗಳಲ್ಲಿ ಬರುತ್ತದೆ. ಟಿಪ್ಪು ಸುಲ್ತಾನನ ದತ್ತಿಗಳೂ ಹಾಗೆಯೇ. ಬ್ರಿಟಿಷರ ವಿರುದ್ಧ ಹೋರಾಡಿದ ನಿಜ– ಆದರೆ ಅವನಂತೆ ಎಲ್ಲ ರಾಜರೂ ತಮ್ಮ ರಾಜ್ಯಕ್ಕಾಗಿ ಹೋರಾಡಿದ್ದಾರೆ. ಅವರೆಲ್ಲ "ಸ್ವಾತಂತ್ರ್ಯ ಹೋರಾಟಗಾರರು" ಅಲ್ಲ. ಟಿಪ್ಪು ಬಗ್ಗೆ ಮೇಲೆ ಉಲ್ಲೇಖಿಸಿರುವ ಉಲ್ಲೇಖಗಳು ಅವನ ಅಂತರಂಗ, ಮನೋಧರ್ಮಗಳ ಸ್ಪಷ್ಟ ಕನ್ನಡಿ. ಕೊಡಗಿನಲ್ಲಿ ಟಿಪ್ಪು ನಡೆಸಿದ ದೌರ್ಜನ್ಯಗಳ ಚಿತ್ರವನ್ನು ಐ.ಮಾ ಮುತ್ತಣ್ಣನವರ "Tippu Sultan X-rayed" ವಿವರವಾಗಿ ಬಿಚ್ಚಿಡುತ್ತದೆ. (ಟಿಪ್ಪುವಿನಿಂದ ಘೋರ ದುಃಖವನ್ನು ಕಂಡ ಕೊಡಗಿನ ವಂಶಕ್ಕೆ ಸೇರಿದವರು ಮುತ್ತಣ್ಣ, ಕಾಸರಗೋಡು ಪಕ್ಕದ ಮಧೂರ್ ಎಂಬಲ್ಲಿನ ಗಣಪತಿ ದೇವಾಲಯವನ್ನು ಟಿಪ್ಪುವು ತನ್ನ ಖಡ್ಗದಿಂದ ಬೀಳಿಸಿದ ಗುರುತಾಗಿ ಒಂದು ಚಿಹ್ನೆ ಇಂದಿಗೂ ಉಳಿದುಕೊಂಡು ಬಂದಿದೆ. (ಚಿತ್ರ ನೋಡಿ) ಅದರ ವಿವರಗಳು ಇಂಟರ್‌ನೆಟ್‌ನಲ್ಲಿ ದೊರಕುತ್ತವೆ.

* * * *

# 13. ಸಮಾರೋಪ

ಟಿಪ್ಪುವಿನ ನಿಜವಾದ ವ್ಯಕ್ತಿತ್ವ ಕುರಿತಂತೆ ಅವನ ಕಾಲದ ಅವನಿಗೆ ಸಂಬಂಧಿಸಿದ ಮೂಲಭೂತ ದಾಖಲೆಗಳನ್ನು ಆಧರಿಸಿ ಒಂದು ಚಿತ್ರವನ್ನು ನೀಡಿದ್ದೇನೆ. ನನ್ನ ಅಂತಿಮ ನಿರ್ಣಯವನ್ನು ಯಾರೂ ಸರಿಯಾದ ಆಧಾರಗಳಿಲ್ಲದೆ ಪ್ರಶ್ನಿಸಲು ಸಾಧ್ಯವೇ ಇಲ್ಲ, ಟಿಪ್ಪು ಬಗ್ಗೆ ಕೆಲವರು ವ್ಯಕ್ತಪಡಿಸಿರುವ ಭಾವನೆಗಳಿಗೆ ಇಲ್ಲಿ ಸಂಕ್ಷಿಪ್ತವಾಗಿ ಉತ್ತರ ಸಿಗುತ್ತದೆ.

**"ಟಿಪ್ಪು ದೇಶಪ್ರೇಮಿ", ವೀರ, ಸ್ವಾತಂತ್ರ್ಯ ಹೋರಾಟಗಾರ?**

ಅವನು ವೀರ ಹೌದು; ಅವನಂತೆಯೇ ಭಾರತದ, ಕರ್ನಾಟಕದ ವೀರರು ಹೋರಾಡಿ ಮಡಿದಿದ್ದಾರೆ. ಅವರಲ್ಲಿ ರಾಜರೂ ಇದ್ದಾರೆ, ಸೈನಿಕರೂ ಇದ್ದಾರೆ, ಹಳ್ಳಿಗರೂ ಇದ್ದಾರೆ. ಅವರ ಶಾಸನಗಳು ನೂರಾರು ದೊರಕುತ್ತವೆ. ಸೈನಿಕರ, ಹಳ್ಳಿಗರ ಶೌರ್ಯವನ್ನು ಕೊಂಡಾಡುವ 'ವೀರಗಲ್ಲು'ಗಳು ಸಾವಿರಾರು ಕರ್ನಾಟಕದ ತುಂಬ ದೊರಕುತ್ತವೆ.

"ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ
ಕ್ಷಣ ವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ"

(ಗೆದ್ದರೆ ಲಕ್ಷ್ಮಿ ದೊರಕುತ್ತಾಳೆ. ಸತ್ತರೆ ಸುರಾಂಗನೆಯರು ದೊರಕುತ್ತಾರೆ. ಆ ಕಾರಣ, ಕ್ಷಣಿಕವಾದ ದೇಹವು ನಾಶವಾಗುತ್ತದೆ ಎಂದು ಯುದ್ಧದಲ್ಲಿ ಸಾಯುವ ಬಗ್ಗೆ ಏಕೆ ಚಿಂತೆ?)

ಮೇಲಿನ ಶ್ಲೋಕವು ಕರ್ನಾಟಕದ ನೂರಾರು ಶಾಸನಗಳಲ್ಲಿ ಉದ್ಧೃತವಾಗಿದೆ. ಪುರುಷರಷ್ಟೇ ವೀರ ಸ್ತ್ರೀಯರೂ ಹೋರಾಡಿದ್ದಾರೆ. ಉದಾಹರಣೆಗೆ ಮಧ್ಯ ಭಾರತದ ಝಾನ್ಸಿರಾಣಿ ಲಕ್ಷ್ಮೀಬಾಯಿ, ಕರ್ನಾಟಕದ ಬೆಳವಡಿ ಮಲ್ಲಮ್ಮ, ವೀರರಾಣಿ ಕಿತ್ತೂರು ಚೆನ್ನಮ್ಮ, ಹನ್ನೊಂದನೇ ಶತಮಾನದ ಚಾಲುಕ್ಯರಾಣಿ ಅಕ್ಕಾದೇವಿ ಇತ್ಯಾದಿ.

ಟಿಪ್ಪು 'ದೇಶಪ್ರೇಮಿ', 'ಸ್ವಾತಂತ್ರ್ಯ ಹೋರಾಟಗಾರ' ಅಲ್ಲ. ಹಿಂದೆ ಅನೇಕ ರಾಜರು ತಮ್ಮ ರಾಜ್ಯ ರಕ್ಷಣೆಗಾಗಿ ಹೋರಾಡಿದರು. ಟಿಪ್ಪುವು ದೇಶಪ್ರೇಮಿ ಆದರೆ, ಅವರೂ ದೇಶಪ್ರೇಮಿಗಳೇ. ಅವರು ಹೋರಾಡಿದ್ದು ತಮ್ಮ ತಮ್ಮ ರಾಜ್ಯ ರಕ್ಷಣೆಗಾಗಿ. ಆಧುನಿಕ ಭಾರತದ ಸ್ವಾತಂತ್ರ್ಯ ಹೋರಾಟಗಾರರು ತಮ್ಮ ಸ್ವಾರ್ಥಕ್ಕಾಗಿ ಅಲ್ಲ, ಅಹಿಂಸೆಯ ಮಾರ್ಗದಲ್ಲಿ ಭಾರತದ ಸ್ವಾತಂತ್ರ್ಯಕ್ಕಾಗಿ



ಹೋರಾಡಿದರು. ಸುಭಾಷ್ ಚಂದ್ರಬೋಸ್ ತನ್ನ ಮಾತೃ ರಾಷ್ಟ್ರವನ್ನು ಬ್ರಿಟಿಷರಿಂದ ಬಿಡುಗಡೆಮಾಡಲು ಹೋರಾಡಿ ಹುತಾತ್ಮರಾದರು. ಸ್ವಾತಂತ್ರ್ಯ ಹೋರಾಟಗಾರರು ಸ್ವಾತಂತ್ರ್ಯದ ನಂತರ ಪ್ರಧಾನಿ ಅಥವಾ ರಾಷ್ಟ್ರಪತಿ ಆಗುವ ಕನಸು ಕಂಡಿರಲಿಲ್ಲ. ಟಿಪ್ಪು ಬ್ರಿಟಿಷರ ವಿರುದ್ಧ ಹೋರಾಡಿ ಗೆದ್ದಿದ್ದರೆ ಅವನು ಹಿಂದಿನಂತೆ ರಾಜ್ಯದ ಅಧಿಪತಿಯಾಗಿ ಮೆರೆಯುತ್ತಿದ್ದನು. ಬ್ರಿಟಿಷರೊಡನೆ ಹೋರಾಡಿದವರಲ್ಲಿ ಟಿಪ್ಪುವೇ ಮೊದಲಿಗನಲ್ಲ. ಬಂಗಾಳದ ನವಾಬ ಸಿರಾಜುದ್ದೀನ್, ಮಹಾರಾಷ್ಟ್ರದ ಪೇಷ್ವೆಗಳು, ಝಾನ್ಸಿರಾಣಿ ಲಕ್ಷ್ಮೀಬಾಯಿ ಇವರೂ ಬ್ರಿಟಿಷರೊಡನೆ ಹೋರಾಡಿದ್ದಾರೆ. ಬ್ರಿಟಿಷರ ವಿರುದ್ಧ ಕಿತ್ತೂರು ಚೆನ್ನಮ್ಮ ತನ್ನ ದತ್ತು ಪುತ್ರನಿಗಾಗಿ ಬ್ರಿಟಿಷರ ವಿರುದ್ಧ ಹೋರಾಡಿದಳು. ಅವರನ್ನೇನೂ 'ಸ್ವಾತಂತ್ರ್ಯ ಯೋಧ' ರೆಂದು (Freedom Fighters) ಗುರುತಿಸಲಿಲ್ಲ. ಈ ವಿಷಯಗಳಲ್ಲಿ ಟಿಪ್ಪುವಿಗೆ ಯಾವ "ವಿಶೇಷ" ಪ್ರಶಸ್ತಿಗಳನ್ನೂ ನೀಡಬೇಕಾಗಿಲ್ಲ.

**ಟಿಪ್ಪುಮಾಡಿದ ಜನೋಪಯೋಗಿ ಕಾರ್ಯಗಳು:**

ಟಿಪ್ಪು ಹೆಂಡದ ಮಾರಾಟವನ್ನು ನಿಲ್ಲಿಸಿ ಎಲ್ಲ ಈಚಲು ಮರಗಳನ್ನು ಕಡಿಸಿ ಹಾಕಿದ ಎಂಬುದು ಮೆಚ್ಚುವ ಸಂಗತಿ. ಹಿಂದಿನ ರಾಜರಂತೆ ಅವನೂ ರಸ್ತೆಗಳನ್ನು ಮಾಡಿಸಿದ, ಕನ್ನಂಬಾಡಿ ಅಣೆಕಟ್ಟು ಕಟ್ಟಿಸಿದ (ಕನ್ನಂಬಾಡಿ ಅಣೆಕಟ್ಟು ಮೊದಲು ಆರಂಭವಾದುದು ಅವನಿಗಿಂತ ಹಿಂದಿನ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ). ಆದರೆ ಅವನು ಕೆಲವು ಸ್ಥಾನಗಳಲ್ಲಿ ಹಿಂದೂಗಳನ್ನು ನೇಮಕಮಾಡಿದ್ದರೂ ಹಣಕಾಸಿನ ವ್ಯವಸ್ಥೆ ನೋಡಿಕೊಳ್ಳಲು ಖಜಾನೆಯ ಮುಖ್ಯಸ್ಥರ ಸ್ಥಾನವನ್ನು ಮುಸಲ್ಮಾನರಿಗೆ ಮೀಸಲಾಗಿರಿಸಿದ. ಅವನಿಗೆ ನಿಷ್ಠೆಯಿಂದಿದ್ದ ಪೂರ್ಣಯ್ಯನವರನ್ನೇ ಮುಸ್ಲಿಂ ಆಗಿ ಮತಾಂತರಿಸಲು ಯತ್ನಿಸಿದ (ಇದನ್ನು ಟಿಪ್ಪು ಮಗ ಸಂಸ್ಕರಿಸಿದ ಕೃತಿಯಲ್ಲಿ ದಾಖಲಿಸಲಾಗಿದೆ). ಮೈಸೂರು ದೊರೆಗಳು ಕಟ್ಟಿಸಿದ್ದು ಎಂಬ ಏಕೈಕ ಕಾರಣಕ್ಕೆ ಮೈಸೂರು ಪಕ್ಕದ ಕೆರೆಯನ್ನೇ ನಾಶಮಾಡಿದ; ಅದರ ಏರಿಯನ್ನೇ ಒಡೆಸಿಹಾಕಿದ. 9ನೇ ಶತಮಾನ ರಾಣಿ ಚಟ್ಟಲದೇವಿ ಕೆರೆ, ಬಾವಿ, ದೇಗುಲ ಕಟ್ಟಿಸಿದ್ದು, ಅದೇ ಕಾಲದ ಆದಿಗೌಡ ರೈತ ಕೆರೆ, ಅರವಂಟಿಕೆ ಮಾಡಿಸಿದ್ದು ಶಾಸನೋಕ್ತ. ಇದು ರಾಜರ, ಜನತೆಯ ಕರ್ತವ್ಯ ಆಗಿತ್ತು.

**ಹಿಂದೂ ಮಠ, ದೇವಾಲಯಗಳಿಗೆ ದತ್ತಿ ನೀಡಿದ್ದು.**

ಟಿಪ್ಪು ಹಿಂದೂ ಧಾರ್ಮಿಕ ಸಂಸ್ಥೆಗಳಿಗೆ ದತ್ತಿ ಕೊಟ್ಟಿದ್ದನ್ನು ಅನೇಕರು ಬಹು ದೊಡ್ಡದು ಮಾಡಿದ್ದಾರೆ. ಆಗಲೇ ನಾನು ಸ್ಪಷ್ಟಪಡಿಸಿರುವಂತೆ ಅವನು ದತ್ತಿ ನೀಡಿದ್ದು, ಎರಡು ಕಾರಣಕ್ಕೆ. ಒಂದು ತನಗೆ ಬರಬಹುದಾದ ಕಷ್ಟಗಳ ನಿವಾರಣೆಗಾಗಿ ದತ್ತಿ ಕೊಟ್ಟಿರಬಹುದು, ದತ್ತಿ ನೀಡುವುದರ ಮೂಲಕ ಆ ಮಠಾಧೀಶರ, ಭಕ್ತರ, ತನ್ನ ಪ್ರದೇಶದ ಹಿಂದೂಗಳ ವಿಶ್ವಾಸ ಉಳಿಸಿಕೊಳ್ಳುವುದು. ಅವನು ಆಳುತ್ತಿದ್ದ ಶ್ರೀರಂಗಪಟ್ಟಣ, ನಂಜನಗೂಡು, ಮೈಸೂರು ಪ್ರದೇಶದ

ಪ್ರಜೆಗಳ ವಿಶ್ವಾಸ ಉಳಿಸಿಕೊಂಡು ತನ್ನ ಆಡಳಿತವನ್ನು ಗಟ್ಟಿಮಾಡಿಕೊಂಡಿದ್ದು ಸ್ಪಷ್ಟವಾಗಿದೆ. ಆದರೂ ಆ ಪ್ರದೇಶದಲ್ಲಿ ಕೆಲವು ಅನ್ಯಾಯಗಳನ್ನು ಮಾಡಿದ. ಆ ಅನ್ಯಾಯಗಳನ್ನು ಮಾಡದೇ ಇದ್ದರೆ ಅವನಿಗೆ ಸಮಾಧಾನವಾಗುತ್ತಿರಲಿಲ್ಲ. ಉದಾಹರಣೆಗೆ, ಶ್ರೀರಂಗಪಟ್ಟಣದ ಆಂಜನೇಯ ದೇವಾಲಯ ಕೆಡವಿ ಮಸೀದಿ ಕಟ್ಟಿಸಿದ; ಆದರೆ ಅಲ್ಲಿಯ ರಂಗನಾಥಸ್ವಾಮಿ ದೇವಾಲಯದ ತಂಟೆಗೆ ಹೋಗಲಿಲ್ಲ – ಏಕೆಂದರೆ ಅದೇ ಆ ಪ್ರದೇಶದ ಅಧಿದೈವ. ಮೈಸೂರಿನಲ್ಲೂ ಅರಮನೆ ಕೆಡವಿಸಿ ಕೆಲವು ದೇವಾಲಯಗಳನ್ನು ನಾಶಪಡಿಸಿದ. ಆದರೆ ಅವನು ಮಾಡಿದ ಘೋರ ಅನ್ಯಾಯಗಳು ದೂರದ ಕೊಡಗು, ಮಲಬಾರಿನಲ್ಲಿ ಹೆಚ್ಚು. ಆ ಬಗ್ಗೆ ಸ್ಪಷ್ಟವಾದ ದಾಖಲೆಗಳಿವೆ. ಕಾರಣವೂ ಸ್ಪಷ್ಟವಾಗಿದೆ. ಅವನು ಕೊಟ್ಟ ದತ್ತಿಗಳು ಅವನು ಮಾಡಿದ ಘೋರ ಅನ್ಯಾಯಗಳನ್ನು ಮುಚ್ಚಿಹಾಕಲು ಅಸಮರ್ಥವಾಗಿವೆ. ಈಗಿನ ರಾಜಕಾರಣಿಗಳು, ವಂಚಕ ಶ್ರೀಮಂತರು ದೇವಾಲಯಗಳಿಗೆ ಭೇಟಿ ನೀಡಿದ್ದೇ ಸುದ್ದಿಯಾಗುತ್ತದೆ. ಅವರು ಕೊಟ್ಟ ದೊಡ್ಡ ಪ್ರಮಾಣದ ಕೊಡುಗೆ ಸುದ್ದಿಯಾಗುತ್ತದೆ. ಆದರೆ ಬಡವರು ಹೋಗುವುದು ದೇವಾಲಯಕ್ಕೆ ನಿಜವಾದ ಭಕ್ತಿಯಿಂದ; ಹೋಗಿ ಒಪ್ಪಿಸುವ ಕಾಣಿಕೆಯೂ ದೊಡ್ಡ ಸುದ್ದಿಯಾಗುವುದಿಲ್ಲ, ಅಷ್ಟೇ ಅಲ್ಲ, ಅದು 'ಸುದ್ದಿ'ಯೇ ಅಲ್ಲ.

### ಅವನ ಕ್ರೌರ್ಯ, ಮತಾಂಧತೆ:

ಇದಂತೂ ಸ್ಪಷ್ಟಾತಿಸ್ಪಷ್ಟ : ಇದನ್ನು ಅವನ ಶಾಸನಗಳು, ಕೈಯಾರೆ ಬರೆದ ಪತ್ರಗಳು, ಅವನ ಖಡ್ಗದ ಮೇಲಿನ ಬರಹ, ಅವನ ಮಗ ತಿದ್ದಿಕೊಟ್ಟ ಪುಸ್ತಕದಲ್ಲಿನ ಉಲ್ಲೇಖಗಳು ಇತ್ಯಾದಿ ಮೂಲಭೂತ ದಾಖಲೆಗಳು ಸೂಚಿಸುತ್ತವೆ, ಅವನ ಒಳ ಅಂತರಂಗ, ಧೋರಣೆ, ಮನಸ್ಸುಗಳನ್ನು. ಅವನಿಗಿಂತ ಹಿಂದಿನ ಉತ್ತರ ಭಾರತದ ಘೋರಿ, ಘಜ್ನಿ, ಬಾಬರ್, ಔರಂಗಜೇಬರ ಪರಂಪರೆಯನ್ನು ಅವನು ಮುಂದುವರಿಸಿದ. ಕುವೆಂಪು ತಮ್ಮ ಒಂದು ಸಂದರ್ಶನದಲ್ಲಿ ಹೇಳಿರುವ ಮಾತು ಇದು, ಬಾಂಗ್ಲಾ ವಿಮೋಚನೆಯ ಹಿನ್ನೆಲೆಯಲ್ಲಿ – "ಅದನ್ನು (ಬಾಂಗ್ಲಾ ವಿಮೋಚನೆ) ನಿವಾರಿಸಲು ಲೌಕಿಕ ಕಾರಣಗಳು ಸಾಲದು; ಧಾರ್ಮಿಕ ಕಾರಣಗಳಿವೆ. ಅದಕ್ಕೆ ನಾವು ಹಿಂದೂಗಳು ಧರ್ಮಕ್ಕಾಗಿ ಪ್ರಾಣ ಕೊಡಬೇಕು ಎನ್ನುತ್ತೇವೆ. ಮುಸ್ಲಿಮರು ಧರ್ಮಕ್ಕಾಗಿ ಪ್ರಾಣ ತೆಗೆಯಬೇಕು ಎನ್ನುತ್ತಾರೆ – ಇಷ್ಟೇ ಅಂತರ". ಈಚೆಗೆ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿದ್ದ ಡಾ. ಸಿ.ಪಿ. ಕೃಷ್ಣಕುಮಾರ್ ಸಾಕಷ್ಟು ಹಿಂದೆ ನೇರವಾಗಿ ಡಾ. ಕುವೆಂಪು ಅವರ ಜೊತೆ ಸಂದರ್ಶನ ನಡೆಸಿದಾಗ ಅವರು ಹೇಳಿದ ಮಾತುಗಳು ಮೇಲಿನವು. ಸಂದರ್ಶನ ಮಾಡಿದ್ದು ಪ್ರತ್ಯೇಕವಾಗಿ ಪ್ರಕಟವಾಗಿದೆ. ಆ ಸಂದರ್ಶನ ನಡೆದದ್ದು20–4–1972ರಲ್ಲಿ, "ಮಹಾಕವಿಯೊಡನೆ ಮಾತುಕತೆ" ಎಂಬ ಪುಸ್ತಕದಲ್ಲಿ ಅಚ್ಚಾಗಿದೆ. (ಸಿ.ಪಿ. ಕೃಷ್ಣಕುಮಾರ್ ಅವರ 'ಮಹಾಕವಿ ಯೊಡನೆ ಮಾತುಕತೆ' 1981) – ಈಚೆಗೆ ಅದು 2004ರಲ್ಲಿ ಕುವೆಂಪು ಸಮಗ್ರ ಗದ್ಯದಲ್ಲಿ (ಸಂ. II. ಸಂ. ಕೆ.ಸಿ. ಶಿವಾರೆಡ್ಡಿ. ಪ್ರಕಾಶಕರು; ಕನ್ನಡ ವಿಶ್ವವಿದ್ಯಾಲಯ, ಹಂಪಿ. 2004) ಆ ಸಂದರ್ಶನದ ಲೇಖನವಿದೆ. ಡಾ. ಸಿ.ಪಿ. ಕೃಷ್ಣಕುಮಾರ್ ಅವರು



21.1.2013 ರಂದು ನನಗೆ ಬರೆದ ಪತ್ರದಲ್ಲಿ ಈ ಮಾತುಗಳಿವೆ. "ಟಿಪ್ಪು ವಿವಾದ ಸಂಬಂಧವಾಗಿ ಈ ಪತ್ರ – ಕುವೆಂಪು ಸಾಹಿತ್ಯದಲ್ಲೆಲ್ಲ ಮುಸ್ಲಿಂ ವಿರೋಧಿ ನಿಲುವುಗಳಿವೆ; ಕವನಗಳಲ್ಲಿ, "ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ" ಅವರೇ ಮೇಲೆ ನಾನು ಉಲ್ಲೇಖಿಸಿರುವ ಕುವೆಂಪು ಉಕ್ತಿಯನ್ನು ನನ್ನ ಗಮನಕ್ಕೆ ತಂದದ್ದು. ಅದು ಸತ್ತಂತಿರುವ ಭಾರತೀಯರನ್ನು ಬಡಿದೆಬ್ಬಿಸುವ ಡಿಂಡಿಮದ ಧ್ವನಿ.

ಒಟ್ಟಾರೆ ಟಿಪ್ಪುವಿನ ಮುಸ್ಲಿಂ ಮನೋಧರ್ಮದ ಒಂದು ಮಾದರಿ ಅದು. ಇದಕ್ಕೆ ವಿನಾಯ್ತಿಗಳು ಇವೆ. ಎಲ್ಲ ಮುಸ್ಲಿಮರೂ ಖಂಡಿತ ಕೆಟ್ಟವರಲ್ಲ.

### ಪರ್ಷಿಯನ್ ಆಡಳಿತ ಭಾಷೆ:

ಟಿಪ್ಪುವರೆಗೆ ಮೈಸೂರರಸರ ರಾಜ್ಯಭಾಷೆ ಅಥವಾ ಆಡಳಿತ ಭಾಷೆ ಕನ್ನಡವಾಗಿತ್ತು. ಟಿಪ್ಪು ಅದನ್ನು ರದ್ದುಪಡಿಸಿ ಅದರ ಜಾಗದಲ್ಲಿ ಪರ್ಷಿಯನ್ ಅಥವಾ ಪರ್ಸೋ – ಅರೇಬಿಕ್ (Perso-Arabic) ಭಾಷೆಯನ್ನು ಅಳವಡಿಸಿದ. ಅವನ ಎಲ್ಲ ಶಾಸನಗಳು, ರಾಜಾಜ್ಞೆಗಳು ಪರ್ಷಿಯನ್ ಭಾಷೆಯಲ್ಲಿವೆ. ಆಗ ತೀರ ಕೆಳಹಂತದಲ್ಲಿ ಕನ್ನಡವನ್ನು ಬಳಸುತ್ತಿದ್ದರೂ. ಮಧ್ಯಮ ಹಂತದಲ್ಲಿ ಪರ್ಷಿಯನ್ ಮತ್ತು ಮರಾಠಿ ಭಾಷೆಗಳನ್ನು ಬಳಸುತ್ತಿದ್ದರೂ ಉನ್ನತ ಮಟ್ಟದಲ್ಲಿ ಪರ್ಷಿಯನ್ ಭಾಷೆಯನ್ನು ಮಾತ್ರ ಬಳಸಲಾಗುತ್ತಿತ್ತು. ಟಿಪ್ಪು ಬಳಿಕ ಬಂದ ಮೈಸೂರು ದೊರೆಗಳು ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮುಂದುವರೆಸಿದರು. ಗಮನಿಸಬೇಕಾದ ಸಂಗತಿಯೆಂದರೆ – ಹೈದರ್, ಟಿಪ್ಪು. ಅವರ ಕಾಲದಲ್ಲಿ ನೂರಾರು ಕೃತಿಗಳು ರಚಿತವಾಗಿವೆ. ಅವರ ಆಡಳಿತದ ಕಾಲದಲ್ಲಿ ಅವರ ಪ್ರೋತ್ಸಾಹದಿಂದ ಕನ್ನಡದಲ್ಲಿ ಯಾವುದೇ ಕೃತಿ ರಚನೆಯಾಗಿಲ್ಲ. (ನೋಡಿ – ಆರ್. ನರಸಿಂಹಾಚಾರ್: ಕರ್ನಾಟಕ ಕವಿ ಚರಿತ್ರೆ, ಆದರೆ ಯಾವ ಕವಿ ಅಥವಾ ಕೃತಿಕಾರನೂ ಹೈದರ್ ಅಥವಾ ಟಿಪ್ಪು ಉಲ್ಲೇಖಿಸಿಲ್ಲ. ಆದರೆ ಮೈಸೂರಿನರಸರ ಪ್ರೋತ್ಸಾಹವಂತೂ ಎಲ್ಲರಿಗೂ ತಿಳಿದಿ ವಿಷಯ.

### ಟಿಪ್ಪು ಹೆಸರಿನ ಮುಸ್ಲಿಂ ವಿಶ್ವವಿದ್ಯಾಲಯ:

ಈ ಬಗ್ಗೆ ವಿವಾದ ಆರಂಭವಾಗಿ ಅದು ತಾರಕಕ್ಕೇರಿದೆ (ಆ ಚರ್ಚೆ ಆರಂಭವಾದುದು ನಾನು 20.11.2012 ರಂದು ನಡೆಯಿಸಿದ ಪತ್ರಕಾಗೋಷ್ಠಿಯಿಂದ). ಆ ವಿವಾದಗಳನ್ನು ನಾನು ಹೆಸರಿಸಲಿಕ್ಕೆ ಹೋಗುವುದಿಲ್ಲ. ಒಂದಂತೂ ಸ್ಪಷ್ಟ. ಟಿಪ್ಪು ಹೆಸರಿನ ಮುಸ್ಲಿಂ (ಅಥವಾ ಅಲ್ಪಸಂಖ್ಯಾತ) ವಿಶ್ವವಿದ್ಯಾಲಯ ಶ್ರೀರಂಗಪಟ್ಟಣದಲ್ಲಿ ಸ್ಥಾಪಿತವಾದರೆ ನಗರದ ಪಾವಿತ್ರ್ಯ ಕ್ರಮೇಣ ನಾಶವಾಗುತ್ತದೆ. ಕಾಶಿಯ ವಿಶ್ವೇಶ್ವರ ದೇವಾಲಯದ ಆವರಣದಲ್ಲಿ ಹಿಂದೆ ಔರಂಗಜೇಬ್ ಮೂಲ ಶಿವಲಿಂಗವನ್ನು ಕಿತ್ತು, ಪಕ್ಕದಲ್ಲೇ ಕಟ್ಟಿಸಿದ ಮಸೀದಿ ಈಗಲೂ ಇದೆ. ಕಿತ್ತು ಹಾಕಿದ ಶಿವಲಿಂಗ ಜ್ಞಾನವಾಪಿ ಎಂಬ ಬಾವಿಯಲ್ಲಿದೆ. ಈಗಿನ ಶಿವಲಿಂಗ ಝಾನ್ಸಿರಾಣಿ ಲಕ್ಷ್ಮೀಬಾಯಿ

6B

ಸ್ಥಾಪಿಸಿದ್ದು. ಹಿಂದೂಗಳ ಪವಿತ್ರ ಕ್ಷೇತ್ರ ಪ್ರಯಾಗದ ಹೆಸರು ಅಲಹಾಬಾದ್ ಎಂದು ನಾಮಕರಣಗೊಂಡು, ಪ್ರಯಾಗ ಎಂಬ ಹೆಸರು ಅಲ್ಲಿನ ಒಂದು ಬಡಾವಣೆಯ ಹೆಸರಾಗಿದೆ. ಪ್ರಯಾಗ ಹೆಸರಿನ ಚಿಕ್ಕ ರೈಲ್ವೇ ನಿಲ್ದಾಣ ಅಲ್ಲಿದೆ. ಗಂಗಾ ಯಮುನಾ ನದಿಗಳು ಸೇರುವ ಜಾಗದಲ್ಲಿ ಒಂದು ದೊಡ್ಡ ಮಸೀದಿ ಕಾಣಿಸುತ್ತದೆ. ರಾಮಜನ್ಮಭೂಮಿ ಅಯೋಧ್ಯೆ ಅಥವಾ ಈಗಿನ ಔಧ್ ನಲ್ಲಿ ರಾಮ ಜನ್ಮಭೂಮಿ ದೇವಾಲಯವನ್ನು ಕೆಡವಿ ಅಲ್ಲಿ ಬಾಬರನು ಮಸೀದಿ ಕಟ್ಟಿಸಿದ. ಇಂತಹ ಇನ್ನೂ ಹಲವು ಉದಾಹರಣೆಗಳಿವೆ. 'ಅಲ್ಪಸಂಖ್ಯಾತ' ಹೆಸರಿನಲ್ಲಿ ವಿಶ್ವವಿದ್ಯಾಲಯ ಸ್ಥಾಪಿತವಾದರೂ ಅಲ್ಲಿನ ಸ್ಥಾನಗಳು ಅರ್ಧದಷ್ಟು ಮುಸ್ಲಿಂ ವಿದ್ಯಾರ್ಥಿಗಳಿಗೆ ಮೀಸಲು. ಕ್ರಮೇಣ ಎಲ್ಲ ಸ್ಥಾನಗಳನ್ನು ತುಂಬಲು ಮುಸ್ಲಿಂ ವಿದ್ಯಾರ್ಥಿಗಳನ್ನೇ ಆರಿಸಬೇಕಾಗುತ್ತದೆ. ಬೇರೆಯವರು ಹೋಗಲು ಹಿಂಜರಿಯುತ್ತಾರೆ. ಆ ಕಳಂಕಿತ ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳು ಹೋಗಲು ಹಿಂಜರಿಯುತ್ತಾರೆ. ಅಲ್ಲಿನ ಶಿಕ್ಷಣ ಮಾಧ್ಯಮ ಉರ್ದು ಆಗಿರುತ್ತದೆ. ಪಠ್ಯ ಕ್ರಮವೂ ಮುಸ್ಲಿಂ ಮಯವಾಗುತ್ತದೆ. ಅಷ್ಟೇ ಅಲ್ಲ, ಆಲಿಗರ್ ಮುಸ್ಲಿಂ ವಿಶ್ವವಿದ್ಯಾಲಯದಂತೆ ಸಿಮಿಯಂತಹ ಉಗ್ರಗಾಮಿ ಸಂಘಟನೆಗಳನ್ನು ಅಪ್ಜಲ್ ಗುರುವಿನಂತಹ ಉಗ್ರಗಾಮಿಗಳನ್ನು ಗುಪ್ತವಾಗಿ ರೂಪಿಸುವ ತಾಣವಾಗುತ್ತದೆ. ಟಿಪ್ಪು ಅನೇಕ ಊರುಗಳ ಹೆಸರುಗಳನ್ನು ಇಸ್ಲಾಮೀಕರಣಮಾಡಿದಂತೆ ಶ್ರೀರಂಗಪಟ್ಟಣ ಹೆಸರೂ ಮುಂದೆ ಒಂದು ಕಾಲದಲ್ಲಿ ಇಸ್ಲಾಮೀಕರಣಗೊಂಡರೆ ಆಶ್ಚರ್ಯವಿಲ್ಲ. ಟಿಪ್ಪುವು ಮೈಸೂರು ಹೆಸರನ್ನು ತೆಗೆದು ನಜರಾಬಾದ್ ಎಂದು ಹೆಸರಿಟ್ಟದ್ದನ್ನು ಅವನ ಮಗ ಪರಿಷ್ಕರಿಸಿದ ಕೃತಿಯಲ್ಲಿ ಹೇಳಿದೆ. (ಮೈಸೂರಿನ ಆ ಬಡಾವಣೆಯಲ್ಲಿ ಬಹು ಸಂಖ್ಯೆಯ ಮಸೀದಿಗಳನ್ನು ಹೆಚ್ಚಿನ ಸಂಖ್ಯೆಯ ಮುಸ್ಲಿಮರನ್ನು ಕಾಣಬಹುದು. ಪರಿಶೀಲಿಸಿದರೆ ಹಲವು ಭಗ್ನ ಹಿಂದೂ ದೇವಾಲಯಗಳ ಅವಶೇಷಗಳು ಸಿಗಬಹುದು). ಬೆಂಗಳೂರಿನ ಟಿಪ್ಪು ಅರಮನೆ ಸಮೀಪವಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಕಟ್ಟಡದ ಹಿಂಭಾಗದಲ್ಲಿ, ನಾಲ್ಕನೇ ಕಾಂಪ್ರೋಂಡಿನಲ್ಲಿ ಶ್ರೀರಾಮೇಶ್ವರ ದೇವಾಲಯವಿದ್ದು ಅಲ್ಲಿ ಒಂದು ಕಡೆ ಭಗ್ನ ಶಿವಲಿಂಗ, ನಂದಿ, ಕಂಬಗಳು ಬಿದ್ದಿವೆ. ಟಿಪ್ಪು ಅರಮನೆಯ ಮುಂಭಾಗದಲ್ಲಿರುವ ಕೋಟೆಯಲ್ಲಿ ಭಗ್ನ ಹಿಂದೂ ದೇವಾಲಯದ ಅವಶೇಷಗಳಿವೆ ಅವು ಭಗ್ನವಾದದ್ದು ಟಿಪ್ಪುವಿನ ಕಾಲದಲ್ಲಿ ಎಂಬ ಊಹೆ ಬಹುಶಃ ಸತ್ಯ. ಈ ಎಲ್ಲ ಕಾರಣಗಳ ಹಿನ್ನೆಲೆಯಲ್ಲಿ ಟಿಪ್ಪು ಹೆಸರೇ ಆ ವಿಶ್ವವಿದ್ಯಾಲಯಕ್ಕೆ ಕಳಂಕಪ್ರಾಯವಾಗುತ್ತದೆ. 'ಅಲ್ಪಸಂಖ್ಯಾತ' ಅಥವಾ ಮುಸ್ಲಿಂ ವಿಶ್ವವಿದ್ಯಾಲಯದ ಹೆಸರು ಕೂಡ ಅಲಿಘಡ್ ವಿಶ್ವವಿದ್ಯಾಲಯದಂತೆ ಕಳಂಕಿತ ವಿಶ್ವವಿದ್ಯಾಲಯವಾಗುತ್ತದೆ. ಆ ಹೆಸರಿನ ವಿಶ್ವವಿದ್ಯಾಲಯ ಶ್ರೀರಂಗಪಟ್ಟಣದಲ್ಲಿ ಆಗದೆ ಬೇರೆ ಕಡೆ ಆದರೂ ಅಂತಹ ವಿಶ್ವವಿದ್ಯಾಲಯವನ್ನು ಎಲ್ಲ ಪ್ರಾಜ್ಞರೂ ವಿರೋಧಿಸಬೇಕು.

ಬೇಕಾದರೆ ಅಲ್ಲಿನ ವಿಶ್ವವಿದ್ಯಾಲಯಕ್ಕೆ ಅಗತ್ಯಬಿದ್ದರೆ ಕರ್ನಾಟಕದ ಸಂತ ಶಿಶುನಾಳ ಶರೀಫ್ ಹೆಸರಿಡಲು ಸೂಚಿಸಿದ್ದೇನೆ. ಈಚೆಗೆ ಕೆಲವರು ಸೂಚಿಸಿರುವ "ಕಾವೇರಿ ವಿಶ್ವವಿದ್ಯಾಲಯ" ಹೆಸರು ಅತ್ಯಂತ ಸೂಕ್ತ. ಸ್ಥಳಗಳ ಮೇಲೆ ಹೆಸರಿಸುವಂತೆ "ಶ್ರೀರಂಗಪಟ್ಟಣ ವಿಶ್ವವಿದ್ಯಾಲಯ"



ಹೆಸರಿಟ್ಟರೂ ಸೂಕ್ತ. "ಕೃಷ್ಣರಾಜ ಒಡೆಯರ್ ವಿ.ವಿ". ಹೆಸರೂ ಪರಿಶೀಲನಾರ್ಹ.

**ಕೊನೆಯಲ್ಲಿ ಸೇರಿಸಿದ್ದು:** ಭಾರತಾದ್ಯಂತ 12–14ನೇ ಶತಮಾನಗಳಲ್ಲಿ ನಡೆದ ಮುಸ್ಲಿಮರ ಧಾಳಿಗಳಿಂದಾಗಿ ನಾಶವಾಗಬಹುದಾಗಿದ್ದ ಹಿಂದೂ ಧರ್ಮವನ್ನು ರಕ್ಷಿಸಿದ್ದು ವಿಜಯನಗರದ ಸಾಮ್ರಾಜ್ಯ ಎಂಬುದು ಎಲ್ಲ ಇತಿಹಾಸಕಾರರ ಒಮ್ಮತ. ಅಂತೆಯೇ, ಹದಿನೆಂಟನೇ ಶತಮಾನದ ಉತ್ತರಾರ್ಧದಲ್ಲಿ ಟಿಪ್ಪುವೇನಾದರೂ ಬ್ರಿಟಿಷರನ್ನು ಸೋಲಿಸಿದ್ದರೆ ದಕ್ಷಿಣ ಭಾರತದಲ್ಲಿ ಹಿಂದೂ ಧರ್ಮದ ಅಸ್ತಿತ್ವಕ್ಕೆ ಖಂಡಿತವಾಗಿ ಧಕ್ಕೆಯಾಗುತ್ತಿತ್ತು. ಕನ್ನಡ ಭಾಷೆಗೂ ಧಕ್ಕೆಯಾಗುತ್ತಿತ್ತು. ಅಂತಹ ಸಂದರ್ಭದಲ್ಲಿ ಟಿಪ್ಪುವನ್ನು ಯುದ್ಧದಲ್ಲಿ ಸೋಲಿಸಿದ ಬ್ರಿಟಿಷರು ಭಾರತೀಯ ಸಂಸ್ಕೃತಿಗೆ ಬಹು ಸಹಾಯ ಮಾಡಿದರು. ಅದರ ಜೊತೆಗೆ, ಬ್ರಿಟಿಷರ ಸಾಮ್ರಾಜ್ಯವು ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಸ್ಥಾಪಿತವಾದ್ದರಿಂದ ರಾಜಕೀಯವಾದ ಅಖಂಡ ಭಾರತದ ಪರಿಕಲ್ಪನೆ ಇಡೀ ಇತಿಹಾಸದಲ್ಲಿ ಮೊದಲು ರೂಪುಗೊಂಡಿತು. ಅದಕ್ಕಿಂತ ಮೊದಲು ಸಾಂಸ್ಕೃತಿಕವಾಗಿ ಅಖಂಡ ಭಾರತದ ಪರಿಕಲ್ಪನೆಯಿತ್ತು. ಆದರೆ ರಾಜಕೀಯ ಅಖಂಡ ಭಾರತ ಅಸ್ತಿತ್ವಕ್ಕೆ ಬಂದುದು ಬ್ರಿಟಿಷರಿಂದ. ಬ್ರಿಟಿಷರು ಭಾರತವನ್ನು ಆಳಿದರು. ಆದರೆ ಹಿಂದೂ ದೇವಾಲಯಗಳನ್ನು ಎಲ್ಲಿಯೂ ಭಗ್ನಗೊಳಿಸಲಿಲ್ಲ. ಕೆಲವರು ಹಿಂದೂ ಧರ್ಮವನ್ನು ಗೌರವಿಸಿದರೂ ಮಿಷನರಿಗಳು ಆಮಿಷ ಒಡ್ಡಿ ಮತಾಂತರಗೊಳಿಸಿದರು. ಆ ಹೊತ್ತಿಗೆ ಭಾರತೀಯರಲ್ಲಿ ದೇಶಭಕ್ತಿ ಉಗಮವಾಗಿ ಪ್ರಜ್ವಲಗೊಂಡು ಅದು ಸ್ವಾತಂತ್ರ್ಯ ಹೋರಾಟದ ರೂಪು ತಾಳಿತು. ಹಲವರು ಹುತಾತ್ಮರ ಬಲಿದಾನದಿಂದ, ಗಾಂಧೀಜಿ ನೇತೃತ್ವದ ಅಹಿಂಸಾಮಾರ್ಗದ ಸ್ವಾತಂತ್ರ್ಯ ಚಳವಳಿಯ ಒತ್ತಡದಿಂದ ಹಿಂಸೆಗೆ ಇಳಿಯದೆ ಬ್ರಿಟಿಷರು ಭಾರತಕ್ಕೆ ಸ್ವಾತಂತ್ರ್ಯವನ್ನು ನೀಡಿದರು – 1947 ಆಗಸ್ಟ್ 15ರಂದು ಸ್ವತಂತ್ರ ಭಾರತ ಉದಯವಾಯ್ತು. ಪಾಕಿಸ್ತಾನ ಮತ್ತು ಬಾಂಗ್ಲಾ ದೇಶಗಳು ಬೇರೆಯಾದವು. ಆ ವ್ಯಥೆಯ ಕಥೆ ಬೇರೆ. ಟಿಪ್ಪು ಮರಣದಿಂದ, ಬ್ರಿಟಿಷರ ಗೆಲುವಿನಿಂದ ಭಾರತಕ್ಕೆ ಬಹಳ ಅನುಕೂಲವಾಯ್ತು ಎಂಬಲ್ಲಿ ಅನುಮಾನವಿಲ್ಲ. ಬ್ರಿಟಿಷರು ಅಥವಾ ಐರೋಪ್ಯರು ಭಾರತದ ಶಾಸನಗಳನ್ನು, ಪ್ರಾಚೀನ ಕೃತಿಗಳನ್ನು ಪ್ರಕಟಿಸಿದರು; ಐರೋಪ್ಯ ಭಾಷೆಗಳಿಗೆ ಅನುವಾದ ಮಾಡಿದರು. ಆ ಉಪಕಾರವನ್ನಂತೂ ನಾವು ಮರೆಯುವಂತಿಲ್ಲ. ಸಾಹಿತ್ಯ, ವಿಜ್ಞಾನ, ತಂತ್ರಜ್ಞಾನ, ಇತಿಹಾಸ ಈ ಕ್ಷೇತ್ರಗಳಲ್ಲಿ ಭಾರತೀಯರಿಗೆ ಆಧುನಿಕತೆಯನ್ನು ಪರಿಚಯ ಮಾಡಿಕೊಟ್ಟರು.

ಯಾವ ಹಿಂದೂ ದೊರೆಯೂ ತನ್ನದಲ್ಲದ ಧರ್ಮವನ್ನು ನಾಶಪಡಿಸಲು ಯತ್ನಿಸಲಿಲ್ಲ. ವಿಜಯ ನಗರದ ದೊರೆಯಾದ ಇಮ್ಮಡಿ ದೇವರಾಯನು ವೈಯಕ್ತಿಕವಾಗಿ ಶೈವನಾಗಿದ್ದರೂ ಆಸ್ಥಾನದಲ್ಲಿ ತನ್ನ ಪಕ್ಕದಲ್ಲಿ ಎತ್ತರದ ವೇದಿಕೆ ಮೇಲೆ ಕುರಾನ್ ಗ್ರಂಥ ಇರಿಸುತ್ತಿದ್ದನೆಂಬುದು ದಾಖಲಾಗಿದೆ. ಕೆಲವೆಡೆ ಧಾರ್ಮಿಕ ಸಂಘರ್ಷಗಳಾಗಿವೆ. ಉದಾಹರಣೆಗೆ ವಚನ ಯುಗದಲ್ಲಿ ವೀರಶೈವರಿಗೂ, ವೀರಶೈವೇತರರಿಗೂ ಸಂಘರ್ಷಗಳಾಗಿವೆ. (ಉದಾ: ಏಕಾಂತ ರಾಮಯ್ಯನಿಗೆ

